# ಯೋಹಾನನು

## ಅಧ್ಯಾಯ 1

1 ಆದಿಯಲ್ಲಿ ವಾಕ್ಯವಿದ್ದನು; ಆ ವಾಕ್ಯವು
ದೇವರೊಂದಿಗೆ ಇದ್ದನು; ಆ ವಾಕ್ಯವು
ದೇವರಾಗಿದ್ದನು.
2 ಆತನೇ ಆದಿಯಲ್ಲಿ ದೇವರೊಂದಿಗೆ
ಇದ್ದನು.
3 ಎಲ್ಲವು ಆತನಿಂದ ಉಂಟಾಯಿತು;
ಉಂಟಾದದ್ದರಲ್ಲಿ ಆತನಿಲ್ಲದೆ ಯಾವದೂ
ಉಂಟಾಗ ಲಿಲ್ಲ.

4 ಆತನಲ್ಲಿ ಜೀವವಿತ್ತು; ಆ ಜೀವವು ಮನುಷ್ಯ
ರಿಗೆ ಬೆಳಕಾಗಿತ್ತು.
5 ಆ ಬೆಳಕು ಕತ್ತಲಲ್ಲಿ ಪ್ರಕಾಶಿಸುತ್ತದೆ; ಆ
ಕತ್ತಲು ಅದನ್ನು ಗ್ರಹಿಸಲಿಲ್ಲ.
6 ದೇವರಿಂದ ಕಳುಹಿ ಸಲ್ಪಟ್ಟ ಒಬ್ಬ
ಮನುಷ್ಯನಿದ್ದನು; ಅವನ ಹೆಸರು
ಯೋಹಾನನು.
7 ಎಲ್ಲರೂ ತನ್ನ ಮೂಲಕವಾಗಿ ನಂಬುವಂತೆ
ಅವನೇ ಆ ಬೆಳಕಿನ ವಿಷಯದಲ್ಲಿ ಸಾಕ್ಷಿ
ಕೊಡುವದಕ್ಕೆ ಸಾಕ್ಷಿಗಾಗಿ ಬಂದನು.
8 ಅವನು ಆ ಬೆಳಕಲ್ಲ. ಆದರೆ ಆ ಬೆಳಕಿನ
ವಿಷಯದಲ್ಲಿ ಸಾಕ್ಷಿ ಕೊಡು ವದಕ್ಕೆ
ಕಳುಹಿಸಲ್ಪಟ್ಟನು.

9 ಲೋಕದಲ್ಲಿ ಬರುವ ಪ್ರತಿಯೊಬ್ಬ
ಮನುಷ್ಯನಿಗೆ ಆತನು ಬೆಳಕನ್ನು ಕೊಡುವ
ನಿಜವಾದ ಬೆಳಕಾಗಿದ್ದನು.
10 ಆತನು ಲೋಕದಲ್ಲಿ ಇದ್ದನು; ಲೋಕವು
ಆತನಿಂದ ಉಂಟಾಯಿತು; ಲೋಕವು
ಆತನನ್ನು ಅರಿಯಲಿಲ್ಲ.
11 ಆತನು ತನ್ನ ಸ್ವಂತದವರ ಬಳಿಗೆ ಬಂದನು.
ಆತನ ಸ್ವಂತದವರು ಆತನನ್ನು
ಅಂಗೀಕರಿಸಲಿಲ್ಲ.
12 ಆದರೆ ಯಾರಾರು ಆತನನ್ನು
ಅಂಗೀಕರಿಸಿದರೋ ಅವರಿಗೆ ಅಂದರೆ ಆತನ
ಹೆಸರಿನ ಮೇಲೆ ನಂಬಿಕೆಯಿಡುವವರಿಗೆ
ದೇವರ ಪುತ್ರರಾಗುವ ಅಧಿಕಾರವನ್ನು ಆತನು

ಕೊಟ್ಟನು.
13 ಇವರು ರಕ್ತದಿಂದಾಗಲಿ ಇಲ್ಲವೆ ಶರೀರದ
ಇಚ್ಛೆಯಿಂದಾಗಲಿ ಇಲ್ಲವೆ ಮನುಷ್ಯನ
ಇಚ್ಛೆಯಿಂದಾ ಗಲಿ ಹುಟ್ಟಿದವರಲ್ಲ,
ದೇವರಿಂದಲೇ ಹುಟ್ಟಿದವರು.
14 ಇದಲ್ಲದೆ ಆ ವಾಕ್ಯವಾಗಿರುವಾತನು
ಶರೀರಧಾರಿ ಯಾಗಿ ಕೃಪೆಯಿಂದಲೂ
ಸತ್ಯದಿಂದಲೂ ತುಂಬಿ ನಮ್ಮ ಮಧ್ಯದಲ್ಲಿ
ವಾಸಮಾಡಿದನು. (ತಂದೆಯಿಂದ ಹುಟ್ಟಿದ
ಒಬ್ಬನೇ ಮಗನ ಮಹಿಮೆಯಂತೆ ನಾವು
ಆತನ ಮಹಿಮೆಯನ್ನು ನೋಡಿದೆವು).
15 ಯೋಹಾನನು ಆತನ ವಿಷಯದಲ್ಲಿ
ಸಾಕ್ಷಿ ಕೊಟ್ಟು--ನನ್ನ ಹಿಂದೆ ಬರುವಾತನು

ನನಗಿಂತ ಮೊದಲೇ ಇದ್ದದರಿಂದ ನನಗಿಂತ
ಮುಂದಿನವನು ಎಂದು ನಾನು
ಹೇಳಿದಾತನು ಈತನೇ ಎಂದು ಕೂಗಿ
ಹೇಳಿದನು.
16 ಆತನ ಸಂಪೂರ್ಣತೆಯೊಳಗಿಂದ
ನಾವೆಲ್ಲರೂ ಕೃಪೆಗಾಗಿ ಕೃಪೆಯನ್ನು
ಹೊಂದಿದೆವು.
17 ನ್ಯಾಯಪ್ರಮಾಣವು ಮೋಶೆಯ
ಮುಖಾಂತರ ವಾಗಿ ಕೊಡಲ್ಪಟ್ಟಿತ್ತು; ಆದರೆ
ಕೃಪೆಯೂ ಸತ್ಯವೂ ಯೇಸು ಕ್ರಿಸ್ತನ
ಮುಖಾಂತರವಾಗಿ ಬಂದವು.
18 ಯಾವನೂ ಯಾವ ಕಾಲದಲ್ಲೂ
ದೇವರನ್ನು ಕಂಡಿಲ್ಲ. ತಂದೆಯ

ಎದೆಯಲ್ಲಿರುವ ಆ ಒಬ್ಬನೇ ಮಗ
ನಾಗಿರುವಾತನು ಆತನನ್ನು
ತಿಳಿಯಪಡಿಸಿದ್ದಾನೆ.
19 ನೀನು ಯಾರು ಎಂದು ಅವನನ್ನು
ಕೇಳುವದ ಕ್ಕಾಗಿ ಯೆಹೂದ್ಯರು
ಯಾಜಕರನ್ನೂ ಲೇವಿಯರನ್ನೂ
ಯೆರೂಸಲೇಮಿನಿಂದ ಕಳುಹಿಸಿದಾಗ
ಯೋಹಾನನು ಕೊಟ್ಟ ಸಾಕ್ಷಿ ಇದೇ.
20 ಅವನು ಒಪ್ಪಿಕೊಂಡನು.
ಅಲ್ಲಗಳೆಯಲಿಲ್ಲ; ಅವನು--ನಾನು ಕ್ರಿಸ್ತನಲ್ಲ
ಎಂದು ಒಪ್ಪಿಕೊಂಡನು.
21 ಅದಕ್ಕವರು--ಹಾಗಾದರೇನು? ನೀನು
ಎಲೀಯನೋ ಎಂದು ಕೇಳಿದರು. ಅದಕ್ಕೆ

ಅವನು--ನಾನಲ್ಲ ಅಂದನು. ಅವರು ನೀನು ಆ ಪ್ರವಾದಿಯೋ ಎಂದು ಕೇಳಿದ್ದಕ್ಕೆ ಅವನು--ಅಲ್ಲ ಎಂದು ಉತ್ತರಕೊಟ್ಟನು.
22 ಆಗ ಅವರು ಅವ ನಿಗೆ--ನೀನು ಯಾರು? ನಮ್ಮನ್ನು ಕಳುಹಿಸಿದವರಿಗೆ ನಾವು ಉತ್ತರ ಹೇಳುವಂತೆ ನೀನು ನಿನ್ನ ವಿಷಯದಲ್ಲಿ ಏನು ಹೇಳುತ್ತೀ ಎಂದು ಕೇಳಿದರು.
23 ಅವನು--ಕರ್ತನ ದಾರಿಯನ್ನು ನೆಟ್ಟಗೆ ಮಾಡಿರಿ ಎಂದು ಅಡವಿ ಯಲ್ಲಿ ಕೂಗುವ ಒಬ್ಬನ ಶಬ್ದವದೆ ಎಂದು ಪ್ರವಾದಿ ಯಾದ ಯೆಶಾಯನು ಹೇಳಿದ ಶಬ್ದವೇ ನಾನು ಎಂದು ಉತ್ತರಕೊಟ್ಟನು.

24 ಕಳುಹಿಸಲ್ಪಟ್ಟವರು ಫರಿಸಾಯರ
ಕಡೆಯುವರಾಗಿದ್ದರು.
25 ಅವರು ಅವನಿಗೆ--ನೀನು ಆ ಕ್ರಿಸ್ತನೂ
ಎಲೀಯನೂ ಇಲ್ಲವೆ ಆ ಪ್ರವಾದಿಯೂ
ಅಲ್ಲದಿದ್ದರೆ ಬಾಪ್ತಿಸ್ಮ ಮಾಡಿಸುವದು ಯಾಕೆ
ಎಂದು ಕೇಳಿದರು.
26 ಯೋಹಾನನು ಅವರಿಗೆ ಪ್ರತ್ಯುತ್ತರ
ವಾಗಿ--ನಾನು ನೀರಿನಿಂದ ಬಾಪ್ತಿಸ್ಮ
ಮಾಡಿಸುತ್ತೇನೆ; ಆದರೆ ನೀವು
ಅರಿಯದಿರುವಂಥ ಒಬ್ಬಾತನು ನಿಮ್ಮ
ಮಧ್ಯದಲ್ಲಿ ನಿಂತಿದ್ದಾನೆ;
27 ಆತನೇ ನನ್ನ ಹಿಂದೆ ಬರು ವಾತನಾಗಿದ್ದು
ನನಗಿಂತ ಮುಂದಿನವನಾದನು; ಆತನ ಕೆರದ

ಬಾರನ್ನು ಬಿಚ್ಚುವದಕ್ಕೆ ನಾನು ಯೋಗ್ಯನಲ್ಲ
ಎಂದು ಹೇಳಿದನು.
28 ಇವುಗಳು ಯೊರ್ದನಿನ ಆಚೆ ಕಡೆಯ
ಬೇಥಾಬರದಲ್ಲಿ ನಡೆದವು; ಅಲ್ಲಿ
ಯೋಹಾನನು ಬಾಪ್ತಿಸ್ಮ ಮಾಡಿಸುತ್ತಿದ್ದನು.
29 ಮರುದಿನ ಯೋಹಾನನು ತನ್ನ ಕಡೆಗೆ
ಬರುತ್ತಿದ್ದ ಯೇಸುವನ್ನು ನೋಡಿ--ಇಗೋ,
ಲೋಕದ ಪಾಪ ವನ್ನು ತೆಗೆದುಹಾಕುವ
ದೇವರ ಕುರಿಮರಿ ಎಂದು ಹೇಳಿದನು.
30 ನನ್ನ ಹಿಂದೆ ಒಬ್ಬ ಮನುಷ್ಯನು ಬರು
ತ್ತಾನೆ; ಆತನು ನನಗಿಂತ ಮೊದಲೇ
ಇದ್ದದರಿಂದ ನನಗಿಂತ ಮುಂದಿನವನು
ಎಂದು ನಾನು ಯಾರ ವಿಷಯದಲ್ಲಿ

ಹೇಳಿದೆನೋ ಆತನೇ ಈತನು.
31 ನಾನು ಆತನನ್ನು ಅರಿತಿರಲಿಲ್ಲ; ಆದರೆ
ಆತನು ಇಸ್ರಾಯೇಲ್ಯರಿಗೆ ಪ್ರತ್ಯಕ್ಷನಾಗುವಂತೆ
ನಾನು ನೀರಿನಿಂದ ಬಾಪ್ತಿಸ್ಮ
ಮಾಡಿಸುವವನಾಗಿ ಬಂದಿದ್ದೇನೆ ಅಂದನು.
32 ಯೋಹಾನನು ಸಾಕ್ಷಿಕೊಟ್ಟು--ಆತ್ಮನು
ಪಾರಿವಾಳ ದಂತೆ ಪರಲೋಕದಿಂದ ಇಳಿದು
ಆತನ ಮೇಲೆ ನೆಲೆ ಗೊಂಡಿರುವದನ್ನು
ನಾನು ನೋಡಿದೆನು.
33 ನಾನು ಆತನನ್ನು ಅರಿತಿರಲಿಲ್ಲ; ಆದರೆ
ನೀರಿನಿಂದ ಬಾಪ್ತಿಸ್ಮ ಮಾಡಿಸುವದಕ್ಕೆ ನನ್ನನ್ನು
ಕಳುಹಿಸಿದಾತನೇ ನನಗೆ-- ಯಾವಾತನ
ಮೇಲೆ ಆತ್ಮನು ಇಳಿದು ನೆಲೆಯಾಗಿರು

ವದನ್ನು ನೀನು ನೋಡುವಿಯೋ ಆತನೇ ಪವಿತ್ರಾತ್ಮ ನಿಂದ ಬಾಪ್ತಿಸ್ಮ ಮಾಡಿಸುವಾತನು ಎಂದು ಹೇಳಿದನು.
34 ನಾನು ನೋಡಿ ಈತನೇ ದೇವರಮಗನೆಂದು ಸಾಕ್ಷಿ ಕೊಟ್ಟಿದ್ದೇನೆ ಅಂದನು.
35 ಮಾರನೆಯ ದಿನ ತಿರಿಗಿ ಯೋಹಾನನೂ ಅವನ ಶಿಷ್ಯರಲ್ಲಿ ಇಬ್ಬರೂ ನಿಂತುಕೊಂಡಿದ್ದರು.
36 ಆಗ ನಡೆ ದಾಡುತ್ತಿದ್ದ ಯೇಸುವನ್ನು ನೋಡಿ ಅವನು (ಯೋಹಾ ನನು)--ಇಗೋ, ದೇವರ ಕುರಿಮರಿ! ಎಂದು ಹೇಳಿದನು.

37 ಅವನು ಹೇಳಿದ್ದನ್ನು ಕೇಳಿ ಆ ಇಬ್ಬರು
ಶಿಷ್ಯರು ಯೆಸುವಿನ ಹಿಂದೆ ಹೋದರು.
38 ಆಗ ಯೆಸು ಹಿಂತಿರುಗಿ ತನ್ನ ಹಿಂದೆ
ಬರುತ್ತಿದ್ದವರನ್ನು ನೋಡಿ ಅವರಿಗೆ--ನೀವು
ಏನು ಹುಡುಕುತ್ತೀರಿ? ಅನ್ನಲು ಅವರು
ಆತನಿಗೆ--ರಬ್ಬಿಯೇ, (ರಬ್ಬಿ ಅಂದರೆ ಗುರು
ಎಂದರ್ಥ) ನೀನು ವಾಸಿಸುವದು ಎಲ್ಲಿ
ಅಂದರು.
39 ಆತನು ಅವರಿಗೆ--ಬಂದು ನೋಡಿರಿ
ಅಂದನು. ಅವರು ಹೋಗಿ ಆತನು
ವಾಸಿಸುತ್ತಿದ್ದ ಸ್ಥಳವನ್ನು ನೋಡಿ ಆ ದಿವಸ
ಆತನ ಸಂಗಡ ಇದ್ದರು. ಆಗ ಹೆಚ್ಚು ಕಡಿಮೆ
ಹತ್ತನೆಯ ತಾಸಾಗಿತ್ತು.

40 ಯೋಹಾ ನನ ಮಾತನ್ನು ಕೇಳಿ
ಆತನನ್ನು ಹಿಂಬಾಲಿಸಿದ ಇಬ್ಬರಲ್ಲಿ ಸೀಮೋನ್
ಪೇತ್ರನ ಸಹೋದರನಾದ ಅಂದ್ರೆಯನು
ಒಬ್ಬನಾಗಿದ್ದನು.
41 ಇವನು ಮೊದಲು ತನ್ನ ಸ್ವಂತ
ಸಹೋದರನಾದ ಸೀಮೋನನನ್ನು ಕಂಡು
ಅವ ನಿಗೆ--ನಾವು ಮೆಸ್ಸೀಯನನ್ನು
ಕಂಡುಕೊಂಡೆವು ಎಂದು ಹೇಳಿದನು
(ಮೆಸ್ಸೀಯನು ಅಂದರೆ ಕ್ರಿಸ್ತನು ಎಂದರ್ಥ).
42 ಆಗ ಅಂದ್ರೆಯನು ಸೀಮೋನನ್ನು
ಯೇಸುವಿನ ಬಳಿಗೆ ಕರಕೊಂಡು ಬಂದನು.
ಯೇಸು ಅವನನ್ನು ನೋಡಿ--ನೀನು
ಯೋನನ ಮಗನಾದ ಸೀಮೋನನು, ನೀನು

ಕೇಫನೆಂದು ಕರೆಯಲ್ಪಡುವಿ ಅಂದನು.
(ಕೇಫ ಅಂದರೆ ಕಲ್ಲು ಎಂದರ್ಥ).
43 ಮರುದಿನ ಯೇಸು ಗಲಿಲಾಯಕ್ಕೆ
ಹೊರಟು ಹೋಗಬೇಕೆಂದಿದ್ದಾಗ ಫಿಲಿಪ್ಪನನ್ನು
ಕಂಡು ಅವ ನಿಗೆ--ನನ್ನನ್ನು ಹಿಂಬಾಲಿಸು
ಅಂದನು.
44 ಫಿಲಿಪ್ಪನು ಅಂದ್ರೆಯನ ಮತ್ತು ಪೇತ್ರನ
ಪಟ್ಟಣವಾದ ಬೇತ್ಸಾಯಿ ದವನು.
45 ಫಿಲಿಪ್ಪನು ನತಾನಯೇಲನನ್ನು ಕಂಡು
ಅವನಿಗೆ--ನ್ಯಾಯಪ್ರಮಾಣದಲ್ಲಿ ಮೋಶೆಯು
ಮತ್ತು ಪ್ರವಾದಿಗಳು ಯಾವಾತನ
ವಿಷಯವಾಗಿ ಬರೆದರೋ ಆತನನ್ನು ನಾವು
ಕಂಡುಕೊಂಡೆವು; ಆತನು ಯೋಸೇಫನ

ಮಗನಾದ ನಜರೇತಿನ ಯೇಸುವು ಅಂದನು.
46 ಅದಕ್ಕೆ ನತಾನಯೇಲನು ಅವನಿಗೆ--
ನಜರೇತಿ ನಿಂದ ಒಳ್ಳೇದೇನಾದರೂ
ಬರುವದೋ? ಅಂದಾಗ ಫಿಲಿಪ್ಪನು
ಅವನಿಗೆ--ಬಂದು ನೋಡು ಅಂದನು.
47 ಯೇಸು ತನ್ನ ಬಳಿಗೆ ಬರುವ
ನತಾನಯೇಲನನ್ನು ಕಂಡು ಅವನ
ವಿಷಯವಾಗಿ--ಇಗೋ, ಇವನು ನಿಜ
ವಾಗಿಯೂ ಇಸ್ರಾಯೇಲನು; ಇವನಲ್ಲಿ
ಕಪಟವಿಲ್ಲ ಅಂದನು.
48 ನತಾನಯೇಲನು ಆತನಿಗೆ--ನೀನು
ನನ್ನನ್ನು ಹೇಗೆ ಬಲ್ಲೆ? ಅಂದನು; ಯೇಸು
ಪ್ರತ್ಯುತ್ತರ ವಾಗಿ ಅವನಿಗೆ--ಫಿಲಿಪ್ಪನು ನಿನ್ನನ್ನು

ಕರೆಯುವದಕ್ಕಿಂತ ಮುಂಚೆ ನೀನು ಆ
ಅಂಜೂರ ಮರದ ಕೆಳಗೆ ಇದ್ದಾಗ ನಾನು
ನಿನ್ನನ್ನು ನೋಡಿದೆನು ಅಂದನು.
49 ನತಾನ ಯೇಲನು ಪ್ರತ್ಯುತ್ತರವಾಗಿ
ಆತನಿಗೆ--ರಬ್ಬಿಯೇ, ನೀನು
ದೇವರಕುಮಾರನು; ನೀನು ಇಸ್ರಾಯೇಲಿನ
ಅರಸನು ಅಂದನು.
50 ಯೇಸು ಪ್ರತ್ಯುತ್ತರವಾಗಿ ಅವನಿಗೆ--ನಾನು
ಆ ಅಂಜೂರ ಮರದ ಕೆಳಗೆ ನಿನ್ನನ್ನು
ನೋಡಿದೆನೆಂದು ಹೇಳಿದ್ದರಿಂದ ನೀನು
ನಂಬು ತ್ತೀಯೋ? ನೀನು ಇವುಗಳಿಗಿಂತ
ಮಹತ್ತಾದವುಗಳನ್ನು ನೋಡುವಿ ಅಂದನು.
51 ಆತನು ಅವನಿಗೆ--ನಿನಗೆ ನಿಜನಿಜವಾಗಿ

ಹೇಳುತ್ತೇನೆ. ಇಂದಿನಿಂದ ಪರಲೋಕವು ತೆರೆದಿರುವದನ್ನೂ ದೇವದೂತರು ಮನುಷ್ಯಕುಮಾರನ ಮೇಲೆ ಏರುವದನ್ನೂ ಇಳಿಯುವದನ್ನೂ ನೀವು ನೋಡುವಿರಿ ಅಂದನು.

## ಅಧ್ಯಾಯ 2

1 ಮೂರನೆಯ ದಿನದಲ್ಲಿ ಗಲಿಲಾಯದ ಕಾನಾದಲ್ಲಿ ಒಂದು ಮದುವೆ ಆಯಿತು. ಅಲ್ಲಿ ಯೇಸುವಿನ ತಾಯಿಯು ಇದ್ದಳು.
2 ಇದಲ್ಲದೆ ಯೇಸುವನ್ನೂ ಆತನ ಶಿಷ್ಯರನ್ನೂ ಮದುವೆಗೆ ಕರೆದಿ ದ್ದರು.

3 ಆಗ ಅವರಿಗೆ ದ್ರಾಕ್ಷಾರಸವು ಸಾಲದೆ
ಹೋದ ದ್ದರಿಂದ ಯೇಸುವಿನ ತಾಯಿಯು
ಆತನಿಗೆ--ಅವರಿಗೆ ದ್ರಾಕ್ಷಾರಸವು ಇಲ್ಲ
ಅಂದಳು.
4 ಯೇಸು ಆಕೆಗೆ-- ಸ್ತ್ರೀಯೇ, ನನ್ನ ಗೊಡವೆ
ನಿನಗೆ ಯಾಕೆ? ನನ್ನ ಗಳಿಗೆ ಯು ಇನ್ನೂ
ಬಂದಿಲ್ಲ ಅಂದನು.
5 ಆತನ ತಾಯಿಯು ಸೇವಕರಿಗೆ--ಆತನು
ನಿಮಗೆ ಏನು ಹೇಳುತ್ತಾನೋ ಅದನ್ನು
ಮಾಡಿರಿ ಅಂದಳು.
6 ಯೆಹೂದ್ಯರ ಶುದ್ಧೀ ಕರಣದ ಪ್ರಕಾರ ಅಲ್ಲಿ
ಪ್ರತಿಯೊಂದು ಎರಡು ಇಲ್ಲವೆ ಮೂರು
ಕೊಳಗ ನೀರು ಹಿಡಿಯುವಷ್ಟು ಆರು ಕಲ್ಲಿನ

ಬಾನೆಗಳು ಇದ್ದವು.
7 ಯೇಸು ಅವರಿಗೆ--ಆ ಬಾನೆ ಗಳಲ್ಲಿ ನೀರು ತುಂಬಿರಿ ಅಂದನು. ಅವರು ಅವುಗಳನ್ನು ಕಂಠದವರೆಗೆ ತುಂಬಿದ್ದರು.
8 ಆತನು ಅವರಿಗೆ--ಈಗ ಇದನ್ನು ತೋಡಿಕೊಂಡು ಹೋಗಿ ಔತಣದ ಪಾರುಪತ್ಯಗಾರನಿಗೆ ಕೊಡಿರಿ ಎಂದು ಹೇಳಲು ಅವರು ತಕ್ಕೊಂಡು ಹೋಗಿ ಕೊಟ್ಟರು.
9 ಔತಣದ ಪಾರುಪತ್ಯ ಗಾರನು ದ್ರಾಕ್ಷಾರಸವಾದ ನೀರನ್ನು ರುಚಿ ನೋಡಿದಾಗ ಅದು ಎಲ್ಲಿಂದ ಬಂತೆಂದು ತಿಳಿಯದವನಾಗಿ (ನೀರನ್ನು ತೋಡಿಕೊಂಡ ಸೇವಕರಿಗೆ ತಿಳಿದಿತ್ತು) ಮದಲಿಂಗನನ್ನು ಕರೆದು

10 ಅವನಿಗೆ--ಪ್ರತಿ ಮನುಷ್ಯನು ಮೊದಲು
ಒಳ್ಳೇ ದ್ರಾಕ್ಷಾರಸವನ್ನು ಕೊಟ್ಟು ಜನರು
ಚೆನ್ನಾಗಿ ಕುಡಿದ ಮೇಲೆ ಕನಿಷ್ಠವಾದದ್ದನ್ನು
ಕೊಡುತ್ತಾನೆ; ಆದರೆ ನೀನು ಇದು ವರೆಗೆ
ಒಳ್ಳೇ ದ್ರಾಕ್ಷಾರಸವನ್ನು ಇಟ್ಟು ಕೊಂಡಿದ್ದೀ
ಅಂದನು.
11 ಯೇಸು ಈ ಮೊದಲನೆಯ ಅದ್ಭುತ
ಕಾರ್ಯವನ್ನು ಗಲಿಲಾಯದ ಕಾನಾದಲ್ಲಿ
ಮಾಡಿ ತನ್ನ ಮಹಿಮೆಯನ್ನು
ತೋರ್ಪಡಿಸಿದನು; ಮತ್ತು ಆತನ ಶಿಷ್ಯರು
ಆತನ ಮೇಲೆ ನಂಬಿಕೆ ಇಟ್ಟರು.
12 ಇದಾದ ಮೇಲೆ ಆತನೂ ಆತನ
ತಾಯಿಯೂ ಆತನ ಸಹೋದರರೂ ಆತನ

ಶಿಷ್ಯರೂ ಕಪೆರ್ನೌಮಿಗೆ ಹೋಗಿ ಅಲ್ಲಿ ಕೆಲವು
ದಿವಸ ಇದ್ದರು.
13 ಯೆಹೂದ್ಯರ ಪಸ್ಕವು ಹತ್ತಿರವಾದಾಗ
ಯೇಸು ಯೆರೂಸಲೇಮಿಗೆ ಹೋಗಿ
14 ದೇವಾಲಯದಲ್ಲಿ ಎತ್ತು ಕುರಿ ಪಾರಿವಾಳ
ಇವುಗಳನ್ನು ಮಾರುವವ ರನ್ನೂ ಹಣ
ಬದಲಾಯಿಸುವವರು ಕೂತಿರುವದನ್ನೂ
ಕಂಡನು;
15 ಆಗ ಆತನು ಸಣ್ಣ ಹಗ್ಗಗಳಿಂದ ಕೊರಡೆ
ಮಾಡಿ ಕುರಿ ಎತ್ತು ಸಹಿತ ಎಲ್ಲರನ್ನೂ
ದೇವಾಲಯದ ಹೊರಕ್ಕೆ ಅಟ್ಟಿ ಚಿನಿವಾರರ
ಹಣವನ್ನು ಚೆಲ್ಲಿ ಮೇಜು ಗಳನ್ನು ಕೆಡವಿದನು.
16 ಆತನು ಪಾರಿವಾಳ ಮಾರುವ ವರಿಗೆ--

ಇವುಗಳನ್ನು ಇಲ್ಲಿಂದ ತಕ್ಕೊಂಡು ಹೋಗಿರಿ;
ನನ್ನ ತಂದೆಯ ಮನೆಯನ್ನು ವ್ಯಾಪಾರದ
ಮನೆಯ ನ್ನಾಗಿ ಮಾಡಬೇಡಿರಿ ಅಂದನು.
17 ಆಗ ಆತನ ಶಿಷ್ಯರು--ನಿನ್ನ ಆಲಯದ
ಆಸಕ್ತಿಯು ನನ್ನನ್ನು ದಹಿಸಿ ಬಿಟ್ಟಿದೆ ಎಂದು
ಬರೆದಿರುವದನ್ನು ಜ್ಞಾಪಕಮಾಡಿ ಕೊಂಡರು.
18 ಆಗ ಯೆಹೂದ್ಯರು ಆತನಿಗೆ--ನೀನು
ಇವುಗಳನ್ನು ಮಾಡುವದಕ್ಕೆ ಯಾವ
ಸೂಚಕಕಾರ್ಯ ವನ್ನು ನಮಗೆ ತೋರಿಸುತ್ತೀ
ಎಂದು ಕೇಳಿದರು.
19 ಯೇಸು ಪ್ರತ್ಯುತ್ತರವಾಗಿ ಅವರಿಗೆ--ಈ
ದೇವಾಲ ಯವನ್ನು ಕೆಡವಿದರೆ ನಾನು
ಮೂರು ದಿನಗಳಲ್ಲಿ ಅದನ್ನು ಎಬ್ಬಿಸುವೆನು

ಅಂದನು.
20 ಅದಕ್ಕೆ ಯೆಹೂದ್ಯರು-- ಈ
ದೇವಾಲಯವನ್ನು ಕಟ್ಟುವದಕ್ಕೆ ನಾಲ್ವತ್ತಾರು
ವರುಷಗಳು ಹಿಡಿದವು; ನೀನು ಮೂರು
ದಿನಗಳಲ್ಲಿ ಅದನ್ನು ಎಬ್ಬಿಸುವಿಯೋ
ಅಂದರು.
21 ಆದರೆ ಆತನು ತನ್ನ ದೇಹವೆಂಬ
ಆಲಯವನ್ನು ಕುರಿತು ಹೇಳಿದನು.
22 ಆದದರಿಂದ ಆತನು ಸತ್ತವರೊಳಗಿಂದ
ಎದ್ದಮೇಲೆ ಆತನ ಶಿಷ್ಯರು ತಮಗೆ ಹೇಳಿದ
ಈ ಮಾತನ್ನು ನೆನಪು ಮಾಡಿಕೊಂಡು
ಬರಹವನ್ನೂ ಯೇಸು ತಮಗೆ ಹೇಳಿದ್ದನ್ನೂ
ನಂಬಿದರು.

23 ಆತನು ಪಸ್ಕಹಬ್ಬದ ದಿನದಲ್ಲಿ
ಯೆರೂಸಲೇಮಿ ನಲ್ಲಿದ್ದಾಗ ಆತನು ಮಾಡಿದ
ಅದ್ಭುತ ಕಾರ್ಯಗಳನ್ನು ಅನೇಕರು ನೋಡಿ
ಆತನ ಹೆಸರಿನಲ್ಲಿ ನಂಬಿಕೆ ಇಟ್ಟರು.
24 ಆದರೆ ಯೇಸು ತನ್ನನ್ನು ಅವರಿಗೆ
ವಶಪಡಿಸಿ ಕೊಳ್ಳಲಿಲ್ಲ; ಯಾಕಂದರೆ ಆತನು
ಎಲ್ಲರನ್ನೂ ಅರಿತ ವನಾಗಿದ್ದನು.
25 ಆತನು ಮನುಷ್ಯರ ಅಂತರಂಗವನ್ನು
ತಿಳಿದವನಾದ ಕಾರಣ ಯಾರೂ ಯಾವ
ಮನುಷ್ಯನ ವಿಷಯದಲ್ಲಿಯೂ ಆತನಿಗೆ
ಸಾಕ್ಷಿಕೊಡಬೇಕಾದ ಅವಶ್ಯವಿರಲಿಲ್ಲ.

# ಅಧ್ಯಾಯ 3

1 ಫರಿಸಾಯರಲ್ಲಿ ಯೆಹೂದ್ಯರ ಅಧಿಕಾರಿ
ಯಾದ ನಿಕೊದೇಮನೆಂಬ ಒಬ್ಬ ಮನುಷ್ಯ
ನಿದ್ದನು.
2 ಇವನು ರಾತ್ರಿಯಲ್ಲಿ ಯೇಸುವಿನ ಬಳಿಗೆ
ಬಂದು ಆತನಿಗೆ--ರಬ್ಬಿಯೇ (ಗುರುವು),
ನೀನು ದೇವರ ಬಳಿಯಿಂದ ಬಂದ
ಬೋಧಕನೆಂದು ನಾವು ಬಲ್ಲೆವು,
ಯಾಕಂದರೆ ದೇವರು ಒಬ್ಬನ ಕೂಡ ಇಲ್ಲದ
ಹೊರತು ನೀನು ಮಾಡುವ
ಅದ್ಭುತಕಾರ್ಯಗಳನ್ನು ಯಾವ
ಮನುಷ್ಯನೂ ಮಾಡಲಾರನು ಅಂದನು.

3 ಯೇಸು ಪ್ರತ್ಯುತ್ತರವಾಗಿ ಅವನಿಗೆ--ನಾನು
ನಿನಗೆ ನಿಜನಿಜವಾಗಿ ಹೇಳುತ್ತೇನೆ, ಒಬ್ಬನು
ತಿರಿಗಿ ಹುಟ್ಟದಿದ್ದರೆ ಅವನು ದೇವರ
ರಾಜ್ಯವನ್ನು ನೋಡಲಾರನು ಅಂದನು.
4 ನಿಕೊದೇಮನು ಆತನಿಗೆ--ಒಬ್ಬನು
ಮುದುಕನಾದ ಮೇಲೆ ಹುಟ್ಟುವದು ಹೇಗೆ?
ಅವನು ತನ್ನ ತಾಯಿಯ ಗರ್ಭದಲ್ಲಿ
ಎರಡನೆಯ ಸಾರಿ ಪ್ರವೇಶಿಸಿ
ಹುಟ್ಟುವದಾದೀತೇ ಎಂದು ಕೇಳಿದನು.
5 ಯೇಸು ಪ್ರತ್ಯುತ್ತರವಾಗಿ ಅವನಿಗೆ--ನಿನಗೆ
ನಿಜನಿಜ ವಾಗಿ ಹೇಳುತ್ತೇನೆ, ಒಬ್ಬನು
ನೀರಿನಿಂದಲೂ ಆತ್ಮ ನಿಂದಲೂ ಹುಟ್ಟದಿದ್ದರೆ
ಅವನು ದೇವರ ರಾಜ್ಯದೊಳಗೆ

ಪ್ರವೇಶಿಸಲಾರನು.
6 ಶರೀರದಿಂದ ಹುಟ್ಟಿದ್ದು ಶರೀ ರವೇ;
ಆತ್ಮನಿಂದ ಹುಟ್ಟಿದ್ದು ಆತ್ಮವೇ.
7 ನೀವು ತಿರಿಗಿ ಹುಟ್ಟತಕ್ಕದ್ದು ಎಂದು ನಾನು
ನಿನಗೆ ಹೇಳಿದ್ದರಿಂದ ಆಶ್ಚರ್ಯಪಡಬೇಡ.
8 ಗಾಳಿಯು ತನ್ನ ಮನಸ್ಸು ಬಂದ ಕಡೆಗೆ
ಬೀಸುತ್ತದೆ; ನೀನು ಅದರ ಶಬ್ದವನ್ನು
ಕೇಳುತ್ತೀ; ಆದರೆ ಅದು ಎಲ್ಲಿಂದ
ಬರುತ್ತದೋ ಎಲ್ಲಿಗೆ ಹೋಗು ತ್ತದೋ
ಹೇಳಲಾರಿ; ಅದರಂತೆಯೇ ಆತ್ಮನಿಂದ
ಹುಟ್ಟಿದ ಪ್ರತಿಯೊಬ್ಬನು ಇದ್ದಾನೆ ಅಂದನು.
9 ಅದಕ್ಕೆ ನಿಕೊ ದೇಮನು ಪ್ರತ್ಯುತ್ತರವಾಗಿ
ಆತನಿಗೆ--ಇವುಗಳು ಹೇಗಾದಾವು ಎಂದು

ಕೇಳಿದ್ದಕ್ಕೆ
10 ಯೇಸು ಪ್ರತ್ಯುತ್ತರ ವಾಗಿ ಅವನಿಗೆ--
ಇಸ್ರಾಯೇಲ್ಯರಿಗೆ ಬೋಧಕನಾಗಿ ರುವ ನಿನಗೆ
ಈ ವಿಷಯಗಳು ತಿಳಿಯುವದಿಲ್ಲವೋ?
11 ನಾನು ನಿನಗೆ ನಿಜನಿಜ ವಾಗಿ
ಹೇಳುತ್ತೇನೆ, ನಾವು ಅರಿತಿರುವದನ್ನು
ಮಾತನಾಡುತ್ತೇವೆ ಮತ್ತು ನೋಡಿ ದ್ದಕ್ಕೆ
ಸಾಕ್ಷೀಕರಿಸುತ್ತೇವೆ; ಆದರೆ ನೀವು ನಮ್ಮ ಸಾಕ್ಷಿ
ಯನ್ನು ಅಂಗೀಕರಿಸುವದಿಲ್ಲ.
12 ನಾನು ಭೂಲೋಕ ದವುಗಳನ್ನು ನಿಮಗೆ
ಹೇಳಿದರೆ ನೀವು ನಂಬುವದಿಲ್ಲ; ಆದರೆ
ಪರಲೋಕದವುಗಳನ್ನು ನಿಮಗೆ ಹೇಳಿದರೆ
ಹೇಗೆ ನಂಬೀರಿ?

13 ಪರಲೋಕದಿಂದ ಇಳಿದು ಬಂದಾತನೇ
ಅಂದರೆ ಪರಲೋಕದಲ್ಲಿರುವ ಮನುಷ್ಯ
ಕುಮಾರನೇ ಹೊರತು ಯಾವನೂ
ಪರಲೋಕಕ್ಕೆ ಏರಿಹೋದವನಲ್ಲ.
14 ಇದಲ್ಲದೆ ಮೋಶೆಯು ಅರಣ್ಯದಲ್ಲಿ
ಸರ್ಪವನ್ನು ಎತ್ತಿದ ಹಾಗೆಯೇ ಮನುಷ್ಯ
ಕುಮಾರನು ಸಹ ಎತ್ತಲ್ಪಡತಕ್ಕದ್ದು.
15 ಹೀಗೆ ಆತನನ್ನು ನಂಬುವ
ಯಾವನಾದರೂ ನಾಶವಾಗದೆ ನಿತ್ಯಜೀವ
ವನ್ನು ಪಡೆದಿರುವನು.
16 ದೇವರು ಲೋಕವನ್ನು ಎಷ್ಟೋ
ಪ್ರೀತಿಮಾಡಿ ತನ್ನ ಒಬ್ಬನೇ ಮಗನನ್ನು
ಕೊಟ್ಟನು; ಆತನನ್ನು ನಂಬುವ

ಯಾವನಾದರೂ ನಾಶವಾಗದೆ ನಿತ್ಯಜೀವ
ವನ್ನು ಪಡೆದವನಾಗಿರುವನು.
17 ದೇವರು ಲೋಕಕ್ಕೆ ತೀರ್ಪು
ಮಾಡುವದಕ್ಕಾಗಿ ಅಲ್ಲ; ಆದರೆ ತನ್ನ ಮಗನ
ಮುಖಾಂತರ ಲೋಕವನ್ನು ರಕ್ಷಿಸುವದಕ್ಕಾಗಿ
ಆತನನ್ನು ಕಳುಹಿಸಿದನು.
18 ಆತನ ಮೇಲೆ ನಂಬಿಕೆ ಇಡುವವನಿಗೆ
ತೀರ್ಪು ಆಗುವದಿಲ್ಲ; ಆದರೆ
ನಂಬಿಕೆಯಿಡದವನಿಗೆ ಆಗಲೇ
ತೀರ್ಪಾಯಿತು; ಯಾಕಂದರೆ ಅವನು
ದೇವರ ಒಬ್ಬನೇ ಮಗನ ಹೆಸರಿನ ಮೇಲೆ
ನಂಬಿಕೆ ಇಡಲಿಲ್ಲ.
19 ಆ ತೀರ್ಪು ಏನಂದರೆ, ಬೆಳಕು ಲೋಕಕ್ಕೆ

ಬಂದಿದ್ದರೂ ಮನುಷ್ಯರ ಕ್ರಿಯೆಗಳು
ಕೆಟ್ಟವುಗಳಾ ಗಿರುವದರಿಂದ ಅವರು
ಬೆಳಕಿಗಿಂತ ಕತ್ತಲೆಯನ್ನೇ ಪ್ರೀತಿ ಮಾಡಿದರು.
20 ಕೆಟ್ಟದ್ದನ್ನು ಮಾಡುವ ಪ್ರತಿ ಯೊಬ್ಬನು ತನ್ನ
ಕೃತ್ಯಗಳು ಖಂಡಿಸಲ್ಪಟ್ಟಾವೆಂದು ಬೆಳಕನ್ನು
ಹಗೆಮಾಡುತ್ತಾನೆ ಮತ್ತು ಬೆಳಕಿಗೆ
ಬರುವದಿಲ್ಲ.
21 ಆದರೆ ಸತ್ಯವನ್ನು ಅನುಸರಿಸುವವನು ತನ್ನ
ಕೃತ್ಯಗಳು ದೇವರಿಂದ ಮಾಡಲ್ಪಟ್ಟವುಗಳೆಂದು
ಪ್ರಕಟವಾಗು ವಂತೆ ಬೆಳಕಿಗೆ ಬರುತ್ತಾನೆ
ಎಂದು ಹೇಳಿದನು.
22 ಇವುಗಳಾದ ಮೇಲೆ ಯೇಸುವೂ ಆತನ
ಶಿಷ್ಯರೂ ಯೂದಾಯ ದೇಶಕ್ಕೆ ಬಂದರು;

ಅಲ್ಲಿ ಆತನು ಅವರೊಂದಿಗೆ ಇದ್ದು ಬಾಪ್ತಿಸ್ಮ
ಮಾಡಿಸುತ್ತಿದ್ದನು.
23 ಇದಲ್ಲದೆ ಯೋಹಾನನು ಸಹ ಸಲೀಮಿನ
ಸವಿಪ ದಲ್ಲಿದ್ದ ಐನೋನಿನಲ್ಲಿ ಬಾಪ್ತಿಸ್ಮ
ಮಾಡಿಸುತ್ತಿದ್ದನು; ಯಾಕಂದರೆ ಅಲ್ಲಿ ಬಹಳ
ನೀರು ಇತ್ತು; ಅವರು (ಜನರು) ಬಂದು
ಬಾಪ್ತಿಸ್ಮ ಮಾಡಿಸಿಕೊಳ್ಳುತ್ತಿದ್ದರು.
24 ಯಾಕಂದರೆ ಯೋಹಾನನು ಅದುವರೆಗೆ
ಸೆರೆಯಲ್ಲಿ ಹಾಕಲ್ಪಟ್ಟಿರಲಿಲ್ಲ.
25 ತರುವಾಯ ಯೋಹಾನನ ಶಿಷ್ಯರಲ್ಲಿ
ಕೆಲವರಿಗೂ ಯೆಹೂದ್ಯರಿಗೂ ಮಧ್ಯದಲ್ಲಿ
ಶುದ್ಧೀಕರಣದ ವಿಷಯವಾಗಿ ವಿವಾದ
ಉಂಟಾಯಿತು.

26 ಅವರು ಯೋಹಾನನ ಬಳಿಗೆ ಬಂದು
ಅವ ನಿಗೆ--ಗುರುವೇ, ಇಗೋ, ಯೊರ್ದನಿನ
ಆಚೆ ನಿನ್ನ ಬಳಿಯಲ್ಲಿದ್ದ ಒಬ್ಬಾತನ
ವಿಷಯದಲ್ಲಿ ನೀನು ಸಾಕ್ಷಿಕೊಟ್ಟೆಯಲ್ಲಾ;
ಆತನೂ ಬಾಪ್ತಿಸ್ಮ ಮಾಡಿಸುತ್ತಾನೆ, ಎಲ್ಲರೂ
ಆತನ ಬಳಿಗೆ ಹೋಗುತ್ತಾರೆ ಅಂದರು.
27 ಯೋಹಾನನು ಪ್ರತ್ಯುತ್ತರವಾಗಿ--
ಪರಲೋಕ ದಿಂದ ಒಬ್ಬ ಮನುಷ್ಯನಿಗೆ
ಕೊಡಲ್ಪಡದ ಹೊರತು ಅವನು
ಯಾವದನ್ನೂ ಹೊಂದಲಾರನು.
28 ನಾನು ಕ್ರಿಸ್ತನಲ್ಲ, ಆದರೆ ಆತನ
ಮುಂದಾಗಿ ಕಳುಹಿಸಲ್ಪಟ್ಟ ವನೆಂದು ನಾನು
ಹೇಳಿದ್ದಕ್ಕೆ ನೀವೇ ನನಗೆ ಸಾಕ್ಷಿಗಳಾ ಗಿದ್ದೀರಿ.

29 ಮದಲಗಿತ್ತಿಯುಳ್ಳವನೇ ಮದಲಿಂಗನು;
ಆದರೆ ಮದಲಿಂಗನ ಸ್ನೇಹಿತನು
ನಿಂತುಕೊಂಡು ಆತನ ಮಾತನ್ನು ಕೇಳಿ
ಮದಲಿಂಗನ ಧ್ವನಿಗೆ ಬಹಳವಾಗಿ ಸಂತೋಷ
ಪಡುತ್ತಾನೆ; ಆದಕಾರಣ ಈ ನನ್ನ
ಸಂತೋಷವು ನೆರವೇರಿತು.
30 ಆತನು ಹೆಚ್ಚಿಸಲ್ಪ ಡತಕ್ಕದ್ದು; ನಾನು
ತಗ್ಗಿಸಲ್ಪಡತಕ್ಕದ್ದು.
31 ಮೇಲಿನಿಂದ ಬರುವಾತನು ಎಲ್ಲರ
ಮೇಲೆ ಇದ್ದಾನೆ; ಯಾವನು
ಭೂಸಂಬಂಧವಾದವನಾಗಿದ್ದಾನೋ ಅವನು
ಭೂ ಸಂಬಂಧದವನಾಗಿದ್ದು
ಭೂಸಂಬಂಧವಾದವುಗಳನ್ನು

ಮಾತನಾಡುತ್ತಾನೆ; ಪರಲೋಕದಿಂದ
ಬರುವಾತನು ಎಲ್ಲರ ಮೇಲೆ ಇದ್ದಾನೆ.
32 ಆತನು ಯಾವದನ್ನು ಕಂಡು
ಕೇಳಿದನೋ ಅದಕ್ಕೆ ಸಾಕ್ಷಿ ಕೊಡುತ್ತಾನೆ;
ಆದರೆ ಆತನ ಸಾಕ್ಷಿಯನ್ನು ಯಾವನೂ
ಅಂಗೀಕರಿಸುವದಿಲ್ಲ.
33 ಆತನ ಸಾಕ್ಷಿಯನ್ನು ಅಂಗೀಕರಿಸಿದವನು
ದೇವರು ಸತ್ಯವಂತನೆಂಬದಕ್ಕೆ ತನ್ನ
ಮುದ್ರೆಯನ್ನು ಹಾಕಿದ್ದಾನೆ.
34 ದೇವರು ಕಳುಹಿಸಿದಾತನು ದೇವರ
ಮಾತುಗಳನ್ನೇ ಆಡುತ್ತಾನೆ; ದೇವರು ಆತನಿಗೆ
ಆತ್ಮನನ್ನು ಅಳತೆ ಮಾಡದೆ ಕೊಡುತ್ತಾನೆ.
35 ತಂದೆಯು ಮಗನನ್ನು ಪ್ರೀತಿಸಿ

ಎಲ್ಲವುಗಳನ್ನು ಆತನ ಕೈಯಲ್ಲಿ ಕೊಟ್ಟಿದ್ದಾನೆ.
36 ಮಗನ ಮೇಲೆ ನಂಬಿಕೆಯಿಡುವವನಿಗೆ
ನಿತ್ಯಜೀವ ಉಂಟು; ಯಾವನು ಮಗನನ್ನು
ನಂಬುವದಿಲ್ಲವೋ ಅವನು ಜೀವವನ್ನು
ಕಾಣುವದಿಲ್ಲ; ಆದರೆ ದೇವರ ಕೋಪವು
ಅವನ ಮೇಲೆ ನೆಲೆಗೊಂಡಿದೆ ಅಂದನು.

## ಅಧ್ಯಾಯ 4

1 ಯೇಸು ಯೋಹಾನನಿಗಿಂತ ಹೆಚ್ಚು
ಶಿಷ್ಯರನ್ನು ಮಾಡಿಕೊಂಡು ಬಾಪ್ತಿಸ್ಮ
ಮಾಡಿಸುತ್ತಿದ್ದದ್ದು ಫರಿಸಾಯರು
ಕೇಳಿದ್ದಾರೆಂದು ಕರ್ತ ನಿಗೆ ಗೊತ್ತಾಯಿತು.

2 (ಆದಾಗ್ಯೂ ಬಾಪ್ತಿಸ್ಮ ಮಾಡಿಸು ತ್ತಿದ್ದಾತನು
ಯೇಸು ತಾನೇ ಅಲ್ಲ, ಆದರೆ ಆತನ ಶಿಷ್ಯರು
ಮಾಡಿಸುತ್ತಿದ್ದರು).
3 ಆಗ ಆತನು ಯೂದಾಯ ವನ್ನು ಬಿಟ್ಟು
ಗಲಿಲಾಯಕ್ಕೆ ತಿರಿಗಿ ಹೊರಟು ಹೋದನು.
4 ಆತನು ಸಮಾರ್ಯದ ಮಾರ್ಗವಾಗಿ
ಹೋಗಬೇಕಾದದ್ದು ಅವಶ್ಯವಾಗಿತ್ತು.
5 ಆಗ ಯಾಕೋಬನು ತನ್ನ ಮಗನಾದ
ಯೋಸೇಫನಿಗೆ ಕೊಟ್ಟ ಭೂಮಿಯ
ಸಮೀಪದಲ್ಲಿರುವ ಸುಖರ್ ಎಂಬ
ಸಮಾರ್ಯದ ಪಟ್ಟಣಕ್ಕೆ ಆತನು ಬಂದನು.
6 ಅಲ್ಲಿ ಯಾಕೋಬನ ಬಾವಿ ಇತ್ತು;
ಯೇಸು ಪ್ರಯಾಣದಿಂದ

ಆಯಾಸಗೊಂಡಿರಲಾಗಿ ಆ ಬಾವಿಯ ಬಳಿಯಲ್ಲಿ ಹಾಗೆಯೇ ಕೂತುಕೊಂಡನು. ಆಗ ಸುಮಾರು ಆರನೇ ತಾಸಾಗಿತ್ತು. (ಅಂದರೆ ಮಧ್ಯಾಹ್ನ ಹನ್ನೆರಡು ಗಂಟೆಯಾಗಿತ್ತು).
7 ಆಗ ಸಮಾರ್ಯದ ಒಬ್ಬ ಸ್ತ್ರೀಯು ನೀರು ಸೇದುವದಕ್ಕಾಗಿ ಬಂದಳು; ಯೇಸು ಆಕೆಗೆ--ನನಗೆ ಕುಡಿಯುವದಕ್ಕೆ ಕೊಡು ಅಂದನು.
8 (ಯಾಕಂದರೆ ಆತನ ಶಿಷ್ಯರು ಆಹಾರವನ್ನು ಕೊಂಡುಕೊಳ್ಳುವದಕ್ಕಾಗಿ ಪಟ್ಟಣದೊಳಕ್ಕೆ ಹೋಗಿದ್ದರು).
9 ಅದಕ್ಕೆ ಆ ಸಮಾ ರ್ಯದ ಸ್ತ್ರೀಯು ಆತನಿಗೆ--ನೀನು ಯೆಹೂದ್ಯನಾಗಿದ್ದು

ಕುಡಿಯುವದಕ್ಕೆ ಕೊಡು ಎಂದು ಸಮಾರ್ಯದ ಸ್ತ್ರೀಯಾದ ನನ್ನಿಂದ ಕೇಳುವದು ಹೇಗೆ? ಯಾಕಂದರೆ ಯೆಹೂದ್ಯರು ಸಮಾರ್ಯದವರೊಂದಿಗೆ ಹೊಕ್ಕು ಬಳಿಕೆ ಮಾಡುವದಿಲ್ಲವಲ್ಲಾ ಅಂದಳು.

10 ಯೇಸು ಪ್ರತ್ಯುತ್ತರವಾಗಿ ಆಕೆಗೆ--ದೇವರ ದಾನವೇನೆಂಬದೂ ಮತ್ತು--ನನಗೆ ಕುಡಿಯುವದಕ್ಕೆ ಕೊಡು ಎಂದು ನಿನ್ನನ್ನು ಕೇಳಿದಾತನು ಯಾರೆಂಬದೂ ನಿನಗೆ ತಿಳಿದಿದ್ದರೆ ನೀನು ಆತನನ್ನು ಕೇಳುತ್ತಿದ್ದಿ ಆತನು ನಿನಗೆ ಜೀವಕರವಾದ ನೀರನ್ನು ಕೊಡುತ್ತಿದ್ದನು ಎಂದು ಹೇಳಿದನು.

11 ಆ ಸ್ತ್ರೀಯು ಆತನಿಗೆ--ಅಯ್ಯಾ
ಸೇದುವದಕ್ಕೆ ನಿನಗೆ ಏನೂ ಇಲ್ಲ ಮತ್ತು ಬಾವಿ
ಅಳವಾಗಿದೆ; ಹೀಗಿರುವಲ್ಲಿ ಆ ಜೀವಕರವಾದ
ನೀರು ನಿನಗೆ ಎಲ್ಲಿಂದ ಬಂತು?
12 ತಾನೂ ತನ್ನ ಮಕ್ಕಳೂ ತನ್ನ ದನಗಳೂ
ಈ ಬಾವಿ ಯಿಂದ ಕುಡಿದು ನಮಗೆ ಅದನ್ನು
ಕೊಟ್ಟ ನಮ್ಮ ತಂದೆಯಾದ
ಯಾಕೋಬನಿಗಿಂತ ನೀನು ದೊಡ್ಡ ವನೋ?
ಅಂದಳು.
13 ಯೇಸು ಪ್ರತ್ಯುತ್ತರವಾಗಿ ಆಕೆಗೆ--ಈ
ನೀರನ್ನು ಕುಡಿಯುವ ಪ್ರತಿಯೊಬ್ಬನಿಗೆ ತಿರಿಗಿ
ನೀರಡಿಕೆಯಾಗುವದು;
14 ಆದರೆ ನಾನು ಕೊಡುವ ನೀರನ್ನು

ಕುಡಿಯುವವನಿಗೆ ಎಂದಿಗೂ ನೀರ
ಡಿಕೆಯಾಗುವದಿಲ್ಲ; ಯಾಕಂದರೆ ನಾನು
ಅವನಿಗೆ ಕೊಡುವ ನೀರು ಅವನಲ್ಲಿ
ನಿತ್ಯಜೀವಕ್ಕೆ ಉಕ್ಕುವ ನೀರಿನ
ಬಾವಿಯಾಗಿರುವದು ಅಂದನು.
15 ಆ ಸ್ತ್ರೀಯು ಆತನಿಗೆ--ಅಯ್ಯಾ ನನಗೆ
ನೀರಡಿಕೆಯಾಗದಂತೆಯೂ ನೀರು
ಸೇದುವದಕ್ಕೆ ನಾನು ಇಲ್ಲಿಗೆ ಬಾರದಂತೆಯೂ
ನನಗೆ ಈ ನೀರನ್ನು ಕೊಡು ಅಂದಳು.
16 ಯೇಸು ಆಕೆಗೆ--ಹೋಗಿ ನಿನ್ನ ಗಂಡನನ್ನು
ಕರಕೊಂಡು ಇಲ್ಲಿಗೆ ಬಾ ಅಂದನು.
17 ಆಗ ಆ ಸ್ತ್ರೀಯು ಪ್ರತ್ಯುತ್ತರ ವಾಗಿ--ನನಗೆ
ಗಂಡನಿಲ್ಲ ಅಂದಳು, ಯೇಸು ಆಕೆಗೆ--ನನಗೆ

ಗಂಡನಿಲ್ಲ ಎಂದು ನೀನು ಹೇಳಿದ್ದು
ಸರಿಯೇ;
18 ಯಾಕಂದರೆ ನಿನಗೆ ಐದು ಮಂದಿ
ಗಂಡಂದಿರಿದ್ದರು; ಈಗ ನಿನಗಿರುವವನು ನಿನ್ನ
ಗಂಡ ನಲ್ಲ; ಆ ವಿಷಯದಲ್ಲಿ ನೀನು
ಹೇಳಿದ್ದು ಸತ್ಯವಾದದ್ದು ಅಂದನು.
19 ಆಗ ಆ ಸ್ತ್ರೀಯು ಆತನಿಗೆ--ಅಯ್ಯಾ
ನೀನು ಒಬ್ಬ ಪ್ರವಾದಿಯೆಂದು ನಾನು
ಗ್ರಹಿಸುತ್ತೇನೆ;
20 ನಮ್ಮ ಪಿತೃಗಳು ಈ ಬೆಟ್ಟದಲ್ಲಿ
ಆರಾಧಿಸಿದರು; ಆದರೆ ಜನರು ಆರಾಧಿಸತಕ್ಕ
ಸ್ಥಳವು ಯೆರೂಸಲೇಮಿ ನಲ್ಲಿಯೇ ಎಂದು
ನೀವು ಅನ್ನುತ್ತೀರಿ ಅಂದಳು.

21 ಯೇಸು ಆಕೆಗೆ--ಸ್ತ್ರೀಯೇ, ನನ್ನನ್ನು
ನಂಬು; ಈ ಬೆಟ್ಟದಲ್ಲಿಯಾಗಲೀ
ಯೆರೂಸಲೇಮಿನಲ್ಲಿಯಾಗಲೀ ನೀವು
ತಂದೆಯನ್ನು ಆರಾಧಿಸದೆ ಇರುವ ಗಳಿಗೆ
ಬರುತ್ತದೆ.
22 ನೀವು ಅರಿಯದೆ ಇರುವದನ್ನು ಆರಾಧಿ
ಸುತ್ತೀರಿ; ನಾವು ಅರಿತಿರುವದನ್ನೇ
ಆರಾಧಿಸುತ್ತೇವೆ; ಯಾಕಂದರೆ ರಕ್ಷಣೆಯು
ಯೆಹೂದ್ಯರಿಂದಲೇ.
23 ನಿಜ ವಾದ ಆರಾಧಕರು ತಂದೆಯನ್ನು
ಆತ್ಮದಿಂದಲೂ ಸತ್ಯ ದಿಂದಲೂ ಆರಾಧಿಸುವ
ಗಳಿಗೆಯು ಬರುತ್ತದೆ, ಅದು ಈಗಲೇ
ಬಂದಿದೆ; ಯಾಕಂದರೆ ತನ್ನನ್ನು ಆರಾಧಿಸು

ವದಕ್ಕೆ ತಂದೆಯು ಅಂಥವರನ್ನು
ಹುಡುಕುತ್ತಾನೆ.
24 ದೇವರು ಆತ್ಮನಾಗಿದ್ದಾನೆ; ಆತನನ್ನು
ಆರಾಧಿಸುವ ವರು ಆತ್ಮದಿಂದಲೂ
ಸತ್ಯದಿಂದಲೂ ಆರಾಧಿಸತಕ್ಕದ್ದು ಅಂದನು.
25 ಆ ಸ್ತ್ರೀಯು ಆತನಿಗೆ--ಕ್ರಿಸ್ತನೆಂದು
ಕರೆಯಲ್ಪಟ್ಟ ಮೆಸ್ಸೀಯನು ಬರುತ್ತಾನೆಂದು
ನಾನು ಬಲ್ಲೆನು; ಆತನು ಬಂದಾಗ ನಮಗೆ
ಎಲ್ಲವುಗಳನ್ನು ತಿಳಿಯಪಡಿಸುವನು ಅಂದಳು.
26 ಯೇಸು ಆಕೆಗೆ--ನಿನ್ನೊಂದಿಗೆ
ಮಾತನಾಡುವ ನಾನೇ ಆತನು ಅಂದನು.
27 ಅಷ್ಟರೊಳಗೆ ಆತನ ಶಿಷ್ಯರು ಬಂದು
ಆತನು ಆ ಸ್ತ್ರೀಯೊಂದಿಗೆ

ಮಾತನಾಡುತ್ತಿದ್ದನೆಂದು ಆಶ್ಚರ್ಯ ಪಟ್ಟರು;
ಆದಾಗ್ಯೂ--ನಿನಗೆ ಏನು ಬೇಕು? ಇಲ್ಲವೆ
ಆಕೆಯೊಂದಿಗೆ ಯಾಕೆ ಮಾತನಾಡುತ್ತೀ
ಎಂದು ಒಬ್ಬ ನಾದರೂ ಕೇಳಲಿಲ್ಲ.
28 ಆಗ ಆ ಸ್ತ್ರೀಯು ತನ್ನ ನೀರಿನ
ಕೊಡವನ್ನು ಬಿಟ್ಟು ಪಟ್ಟಣದೊಳಕ್ಕೆ
ಹೊರಟುಹೋಗಿ ಜನರಿಗೆ--
29 ಬನ್ನಿರಿ, ನಾನು ಮಾಡಿದವುಗಳನ್ನೆಲ್ಲಾ
ನನಗೆ ತಿಳಿಸಿದ ಮನುಷ್ಯನನ್ನು ನೋಡಿರಿ;
ಈತನು ಆ ಕ್ರಿಸ್ತನಲ್ಲವೇ ಅಂದಳು.
30 ಆಗ ಅವರು ಪಟ್ಟಣದಿಂದ ಆತನ ಬಳಿಗೆ
ಹೊರಟು ಬಂದರು.
31 ಆ ಸಮಯದಲ್ಲಿ ಆತನ ಶಿಷ್ಯರು

ಆತನಿಗೆ--ಬೋಧಕನೇ, ಊಟ ಮಾಡು
ಎಂದು ಬೇಡಿ ಕೊಂಡರು.
32 ಆದರೆ ಆತನು ಅವರಿಗೆ--ನಿಮಗೆ
ತಿಳಯದಿರುವ ಆಹಾರವು ನನಗೆ ಊಟಕ್ಕೆ
ಇದೆ ಅಂದನು.
33 ಆದದರಿಂದ ಶಿಷ್ಯರು--ಊಟ ಮಾಡು
ವದಕ್ಕೆ ಯಾರಾದರೂ ಆತನಿಗೆ ಏನಾದರೂ
ತಂದು ಕೊಟ್ಟರೋ ಎಂದು ಒಬ್ಬರಿಗೊಬ್ಬರು
ಮಾತನಾಡಿ ಕೊಂಡರು.
34 ಆದರೆ ಯೇಸು ಅವರಿಗೆ--ನನ್ನನ್ನು
ಕಳುಹಿಸಿದಾತನ ಚಿತ್ತವನ್ನು ನೆರವೇರಿಸಿ ಆತನ
ಕೆಲಸ ವನ್ನು ಪೂರೈಸುವದೇ ನನ್ನ ಆಹಾರ
ಅಂದನು.

35 ನೀವು--ಸುಗ್ಗಿಯು ಬರುವದಕ್ಕೆ ಇನ್ನೂ
ನಾಲ್ಕು ತಿಂಗಳುಗಳು ಇವೆಯೆಂದು
ಹೇಳುತ್ತೀರಲ್ಲವೋ? ಮತ್ತು--ಇಗೋ, ನಿಮ್ಮ
ಕಣ್ಣುಗಳನ್ನು ಮೇಲಕ್ಕೆತ್ತಿ ಹೊಲಗಳನ್ನು
ನೋಡಿರಿ, ಯಾಕಂದರೆ ಅವು ಈಗಾ ಗಲೇ
ಬೆಳ್ಳಗಾಗಿ ಕೊಯಿಲ್ಲಗೆ ಬಂದವೆ ಎಂದು ನಾನು
ನಿಮಗೆ ಹೇಳುತ್ತೇನೆ.
36 ಕೊಯ್ಯುವವನು ಕೂಲಿಯನ್ನು ಹೊಂದಿ
ನಿತ್ಯಜೀವಕ್ಕಾಗಿ ಫಲವನ್ನು ಕೂಡಿಸಿಕೊಳ್ಳು
ತ್ತಾನೆ; ಹೀಗೆ ಬಿತ್ತುವವನೂ
ಕೊಯ್ಯುವವನೂ ಒಟ್ಟಾಗಿ
ಸಂತೋಷಿಸುವರು.
37 ಬಿತ್ತುವವನೊಬ್ಬನು, ಕೊಯ್ಯು ವವನು

ಮತ್ತೊಬ್ಬನು ಎಂದು ಹೇಳುವ ಮಾತು ಇದ
ರಲ್ಲಿ ಸತ್ಯವಾಗಿದೆ.
38 ನೀವು ಕಷ್ಟಪಡದಂಥ ಬೆಳೆಯನ್ನು
ಕೊಯ್ಯುವದಕ್ಕೆ ನಾನು ನಿಮ್ಮನ್ನು
ಕಳುಹಿಸಿದೆನು. ಬೇರೊಬ್ಬರು ಕಷ್ಟ ಪಟ್ಟರು
ನೀವು ಅವರ ಕಷ್ಟದಲ್ಲಿ ಸೇರಿಕೊಂಡಿದ್ದೀರಿ
ಅಂದನು.
39 ಆಗ--ನಾನು ಮಾಡಿ ದೆಲ್ಲವನ್ನು ನನಗೆ
ತಿಳಿಸಿದನೆಂದು ಸಾಕ್ಷಿಕೊಟ್ಟ ಆ ಸ್ತ್ರೀಯ
ಮಾತಿಗೋಸ್ಕರ ಆ ಪಟ್ಟಣದ ಅನೇಕ
ಸಮಾರ್ಯದವರು ಆತನ ಮೇಲೆ ನಂಬಿಕೆ
ಇಟ್ಟರು.
40 ಹೀಗೆ ಆ ಸಮಾರ್ಯ ದವರು ಆತನ

ಬಳಿಗೆ ಬಂದಾಗ ಆತನು ತಮ್ಮೊಂದಿಗೆ ಇರಬೇಕೆಂದು ಆತನನ್ನು ಬೇಡಿಕೊಳ್ಳಲು ಆತನು ಎರಡು ದಿವಸ ಅಲ್ಲಿ ಇಳುಕೊಂಡನು.
41 ಇನ್ನೂ ಹೆಚ್ಚು ಜನರು ಆತನ ಸ್ವಂತ ಮಾತಿಗೋಸ್ಕರ ಆತನನ್ನು ನಂಬಿದರು.
42 ಆ ಸ್ತ್ರೀಗೆ-- ನಾವು ಈಗ ನಂಬುವದು ನಿನ್ನ ಮಾತಿನಿಂದಲ್ಲ; ಯಾಕಂದರೆ ನಾವೇ ಸ್ವತಃ ಈತನ ಮಾತನ್ನು ಕೇಳಿದ್ದೇವೆ ಮತ್ತು ಈತನು ನಿಜವಾಗಿಯೂ ಲೋಕರಕ್ಷಕನಾದ ಕ್ರಿಸ್ತನೆಂದು ಬಲ್ಲೆವು ಅಂದರು.
43 ಎರಡು ದಿವಸಗಳಾದ ಮೇಲೆ ಆತನು ಅಲ್ಲಿಂದ ಹೊರಟು ಗಲಿಲಾಯಕ್ಕೆ ಹೋದನು.

44 ಯಾಕಂದರೆ ಪ್ರವಾದಿಗೆ ತನ್ನ ಸ್ವದೇಶದಲ್ಲಿ
ಸನ್ಮಾನವಿಲ್ಲವೆಂದು ಯೇಸು ತಾನೇ ಸಾಕ್ಷಿ
ಹೇಳಿದನು.
45 ಗಲಿಲಾಯ ದವರು ಯೆರೂಸಲೇಮಿನ
ಹಬ್ಬಕ್ಕೆ ಹೋದಾಗ ಆತನು ಅಲ್ಲಿ
ಮಾಡಿದವುಗಳನ್ನೆಲ್ಲಾ ಅವರು ನೋಡಿ
ದ್ದರಿಂದ ಆತನು ಗಲಿಲಾಯಕ್ಕೆ ಬಂದಾಗ
ಆತನನ್ನು ಸ್ವೀಕರಿಸಿದರು.
46 ಹೀಗೆ ಯೇಸು ತಾನು ನೀರನ್ನು
ದ್ರಾಕ್ಷಾರಸ ವನ್ನಾಗಿ ಮಾಡಿದ ಗಲಿಲಾಯದ
ಕಾನಾನಿಗೆ ತಿರಿಗಿ ಬಂದನು. ಆಗ
ಕಪೆರ್ನೌಮಿನಲ್ಲಿದ್ದ ಒಬ್ಬ ಪ್ರಧಾನನ ಮಗನು
ಅಸ್ವಸ್ಥನಾಗಿದ್ದನು.

47 ಯೇಸು ಯೂದಾಯ ದಿಂದ
ಗಲಿಲಾಯಕ್ಕೆ ಬಂದನೆಂದು ಅವನು
ಕೇಳಿದಾಗ ಆತನ ಬಳಿಗೆ ಹೋಗಿ ತಾನು
ಬಂದು ತನ್ನ ಮಗನನ್ನು ಸ್ವಸ್ಥಪಡಿಸಬೇಕೆಂದು
ಆತನನ್ನು ಬೇಡಿಕೊಂಡನು; ಯಾಕಂದರೆ
ಅವನು ಸಾಯುವ ಹಾಗಿದ್ದನು.
48 ಯೇಸು ಅವನಿಗೆ--ನೀವು ಸೂಚಕ
ಕಾರ್ಯಗಳನ್ನೂ ಅದ್ಭುತಕಾರ್ಯಗಳನ್ನೂ
ನೋಡದ ಹೊರತು ನಂಬು ವದೇ ಇಲ್ಲ
ಅಂದನು.
49 ಆಗ ಆ ಪ್ರಧಾನನು ಆತನಿಗೆ--ಅಯ್ಯಾ
ನನ್ನ ಮಗನು ಸಾಯುವದಕ್ಕೆ ಮೊದಲು
ಬರಬೇಕು ಅಂದನು.

50 ಯೇಸು ಅವನಿಗೆ--ನೀನು ಹೋಗು,
ನಿನ್ನ ಮಗನು ಬದುಕಿರುತ್ತಾನೆ ಅಂದನು.
ಮತ್ತು ಆ ಮನುಷ್ಯನು ಯೇಸು ಹೇಳಿದ
ಮಾತನ್ನು ನಂಬಿ ಹೊರಟುಹೋದನು.
51 ಹೀಗೆ ಅವನು ಹೋಗುತ್ತಿರುವಾಗ ಅವನ
ಸೇವಕರು ಅವ ನನ್ನು ಸಂಧಿಸಿ--ನಿನ್ನ ಮಗನು
ಬದುಕಿದನು ಎಂದು ಅವನಿಗೆ ಹೇಳಿದರು.
52 ಆಗ ಅವನು--ಯಾವ ಗಳಿಗೆಯಲ್ಲಿ
ಅವನಿಗೆ ಗುಣವಾಗತೊಡಗಿತು ಎಂದು
ಅವರನ್ನು ವಿಚಾರಿಸಿದಾಗ ಅವರು ನಿನ್ನೆ
ಏಳನೇ ತಾಸಿನಲ್ಲಿ ಜ್ವರವು ಅವನನ್ನು ಬಿಟ್ಟಿತು
ಎಂದು ಅವನಿಗೆ ಹೇಳಿದರು.
53 ಹೀಗೆ--ನಿನ್ನ ಮಗನು ಬದುಕುತ್ತಾನೆ

ಎಂದು ಯೇಸು ತನಗೆ ಹೇಳಿದ ಗಳಿಗೆಯಲ್ಲಿಯೇ ಅದು ಆಯಿತೆಂದು ತಂದೆಯು ತಿಳಿದುಕೊಂಡು ತಾನೂ ತನ್ನ ಮನೆಯವರೆಲ್ಲರೂ ನಂಬಿದರು.
54 ಯೇಸು ಯೂದಾಯದಿಂದ ಗಲಿಲಾಯಕ್ಕೆ ಬಂದಮೇಲೆ ತಿರಿಗಿ ಮಾಡಿದ ಎರಡನೆಯ ಅದ್ಭುತಕಾರ್ಯವು ಇದಾಗಿದೆ.

## ಅಧ್ಯಾಯ 5

1 ಇದಾದ ಮೇಲೆ ಯೆಹೂದ್ಯರದೊಂದು ಹಬ್ಬ ಇದ್ದದರಿಂದ ಯೇಸು ಯೆರೂಸಲೇಮಿಗೆ ಹೋದನು.

2 ಯೆರೂಸಲೇಮಿನಲ್ಲಿ ಕುರಿ ಮಾರುವ
ಸ್ಥಳದ ಹತ್ತಿರದಲ್ಲಿ ಒಂದು ಕೊಳವಿದೆ; ಇದು
ಇಬ್ರಿಯ ಭಾಷೆಯಲ್ಲಿ ಬೇತ್ಸಥಾ ಎಂದು
ಕರೆಯು ಲ್ಪಡುತ್ತದೆ. ಅದಕ್ಕೆ ಐದು
ದ್ವಾರಾಂಗಳಗಳಿವೆ.
3 ಇವು ಗಳಲ್ಲಿ ಬಲಹೀನರೂ ಕುರುಡರೂ
ಕುಂಟರೂ ಮೈ ಒಣಗಿದವರೂ ಆಗಿದ್ದ
ದೊಡ್ಡ ಸಮೂಹವು ಬಿದ್ದು ಕೊಂಡಿದ್ದು
ನೀರಿನ ಕದಲಿಸುವಿಕೆಗಾಗಿ ಕಾದುಕೊಂಡಿ
ದ್ದರು.
4 ಆಯಾ ಕಾಲದಲ್ಲಿ ಒಬ್ಬ ದೂತನು ಕೊಳ
ದೊಳಗೆ ಇಳಿದುಹೋಗಿ ನೀರನ್ನು
ಕದಲಿಸುತ್ತಿದ್ದನು; ನೀರು ಕದಲಿಸಲ್ಪಟ್ಟ ಮೇಲೆ

ಮೊದಲು ಯಾರು ನೀರಿನೊಳಗೆ ಹೆಜ್ಜೆಯಿಡುತ್ತಿದ್ದರೋ ಅವರಿಗೆ ಯಾವ ರೋಗವಿದ್ದರೂ ಸ್ವಸ್ಥವಾಗುತ್ತಿತ್ತು.
5 ಆಗ ಮೂವತ್ತೆಂಟು ವರುಷದಿಂದ ರೋಗಿಯಾಗಿದ್ದ ಒಬ್ಬಾನೊಬ್ಬ ಮನು ಷ್ಯನು ಅಲ್ಲಿ ಇದ್ದನು.
6 ಅವನು ಬಿದ್ದುಕೊಂಡಿರುವದನ್ನು ಯೇಸು ನೋಡಿ ಅವನು ಬಹುಕಾಲದಿಂದ ಆ ಸ್ಥಿತಿ ಯಲ್ಲಿ ಇದ್ದಾನೆಂದು ತಿಳಿದು ಅವನಿಗೆ--ನಿನಗೆ ಸ್ವಸ್ಥವಾ ಗುವದಕ್ಕೆ ಮನಸ್ಸುಂಟೋ ಎಂದು ಕೇಳಿದನು.
7 ಅದಕ್ಕೆ ಆ ರೋಗಿಯು ಪ್ರತ್ಯುತ್ತರವಾಗಿ ಆತನಿಗೆ--ಅಯ್ಯಾ ನೀರು ಕದಲಿಸಲ್ಪಡುವಾಗ

ನನ್ನನ್ನು ಕೊಳದೊಳಗೆ ಇಳಿಸುವದಕ್ಕೆ ನನಗೆ
ಯಾರು ಇಲ್ಲ; ಆದರೆ ನಾನು
ಬರುತ್ತಿರುವಾಗಲೇ ನನಗಿಂತ ಮುಂದಾಗಿ
ಮತ್ತೊಬ್ಬನು ಇಳಿಯುತ್ತಾನೆ ಅಂದನು.
8 ಯೇಸು ಅವನಿಗೆ-- ಎದ್ದು ನಿನ್ನ
ಹಾಸಿಗೆಯನ್ನು ತೆಗೆದುಕೊಂಡು ನಡೆ
ಅಂದನು.
9 ಕೂಡಲೆ ಆ ಮನುಷ್ಯನು ಸ್ವಸ್ಥನಾಗಿ ತನ್ನ
ಹಾಸಿಗೆಯನ್ನು ತೆಗೆದುಕೊಂಡು ನಡೆದನು; ಆ
ದಿನವು ಸಬ್ಬತ್ತಾಗಿತ್ತು.
10 ಆದದರಿಂದ ಯೆಹೂದ್ಯರು
ಸ್ವಸ್ಥನಾದವನಿಗೆ--ಇದು ಸಬ್ಬತ್ ದಿನವಾಗಿದೆ;
ನೀನು ಹಾಸಿಗೆಯನ್ನು ಹೊತ್ತುಕೊಳ್ಳುವದು

ನ್ಯಾಯವಲ್ಲ ಅಂದರು.
11 ಅವನು ಪ್ರತ್ಯುತ್ತರವಾಗಿ ಅವರಿಗೆ--ನನ್ನನ್ನು
ಸ್ವಸ್ಥ ಮಾಡಿದಾತನೇ--ನಿನ್ನ ಹಾಸಿಗೆಯನ್ನು
ತೆಗೆದುಕೊಂಡು ನಡೆ ಎಂದು ನನಗೆ
ಹೇಳಿದ್ದಾನೆ ಅಂದನು.
12 ಅದಕ್ಕೆ ಅವರು ಅವನಿಗೆ--ನಿನ್ನ
ಹಾಸಿಗೆಯನ್ನು ತೆಗೆದುಕೊಂಡು ನಡೆ ಎಂದು
ನಿನಗೆ ಹೇಳಿದ ಮನುಷ್ಯನು ಯಾರು ಎಂದು
ಕೇಳಿದರು.
13 ಆದರೆ ಆತನು ಯಾರೆಂದು
ಸ್ವಸ್ಥನಾದವನಿಗೆ ತಿಳಿದಿರಲಿಲ್ಲ; ಯಾಕಂದರೆ ಆ
ಸ್ಥಳ ದಲ್ಲಿ ಜನಸಮೂಹವು ಇದ್ದದರಿಂದ
ಯೇಸು ಅಲ್ಲಿಂದ ಸರಕೊಂಡು ಹೋಗಿದ್ದನು.

14 ತರುವಾಯ ಯೇಸು ಅವನನ್ನು
ದೇವಾಲಯದಲ್ಲಿ ಕಂಡುಕೊಂಡು ಅವ
ನಿಗೆ--ಇಗೋ, ನಿನಗೆ ಸ್ವಸ್ಥವಾಯಿತಲ್ಲಾ; ನಿನ್ನ
ಮೇಲೆ ಹೆಚ್ಚಿನ ಕೇಡು ಬಾರದಂತೆ ಇನ್ನು
ಪಾಪಮಾಡಬೇಡ ಅಂದನು.
15 ಆಗ ಅವನು ಹೊರಟು ಹೋಗಿ ತನ್ನನ್ನು
ಸ್ವಸ್ಥಪಡಿಸಿದಾತನು ಯೇಸುವೇ ಎಂದು
ಯೆಹೂದ್ಯ ರಿಗೆ ತಿಳಿಸಿದನು.
16 ಆತನು ಇವುಗಳನ್ನು ಸಬ್ಬತ್ ದಿನದಲ್ಲಿ
ಮಾಡಿದ ಕಾರಣ ಯೆಹೂದ್ಯರು ಯೇಸು
ವನ್ನು ಹಿಂಸಿಸಿ ಆತನನ್ನು ಕೊಲ್ಲುವದಕ್ಕೆ
ನೋಡಿದರು.
17 ಆದರೆ ಯೇಸು ಅವರಿಗೆ--ನನ್ನ

ತಂದೆಯು ಈ ವರೆಗೂ ಕೆಲಸ ಮಾಡುತ್ತಾನೆ ಮತ್ತು ನಾನೂ ಕೆಲಸ ಮಾಡುತ್ತೇನೆ ಅಂದನು.
18 ಆದದರಿಂದ ಆತನು ಸಬ್ಬತ್ತನ್ನು ವಿುರಿದ್ದು ಮಾತ್ರವಲ್ಲದೆ ದೇವರನ್ನು ತನ್ನ ಸ್ವಂತ ತಂದೆ ಎಂದು ಕರೆದು ತನ್ನನ್ನು ದೇವರಿಗೆ ಸಮಾನ ಮಾಡಿಕೊಂಡ ಕಾರಣ ಯೆಹೂದ್ಯರು ಆತನನ್ನು ಕೊಲ್ಲುವದಕ್ಕೆ ಇನ್ನಷ್ಟು ಪ್ರಯತ್ನ ಮಾಡಿದರು.
19 ಆಗ ಯೇಸು ಪ್ರತ್ಯುತ್ತರವಾಗಿ ಅವರಿಗೆ--ನಾನು ನಿಮಗೆ ನಿಜನಿಜವಾಗಿ ಹೇಳುತ್ತೇನೆ, ತಂದೆಯು ಮಾಡುವದನ್ನು ಕಂಡದ್ದನ್ನಲ್ಲದೆ ಮಗನು ತನ್ನಷ್ಟಕ್ಕೆ ತಾನೇ ಯಾವದನ್ನೂ

ಮಾಡಲಾರನು; ಆತನು ಮಾಡುವದನ್ನೆಲ್ಲಾ ಹಾಗೆಯೇ ಮಗನೂ ಮಾಡುವನು.
20 ಯಾಕಂದರೆ ತಂದೆಯು ಮಗನನ್ನು ಪ್ರೀತಿಸಿ ತಾನು ಸ್ವತಃ ಮಾಡುವವುಗಳನ್ನೆಲ್ಲಾ ಮಗನಿಗೆ ತೋರಿಸುತ್ತಾನೆ; ನೀವು ಆಶ್ಚರ್ಯಪಡುವ ಹಾಗೆ ಇವುಗಳಿಗಿಂತ ಮಹತ್ತಾದ ಕೆಲಸಗಳನ್ನು ಆತನಿಗೆ ತೋರಿಸುವನು.
21 ತಂದೆಯು ಹೇಗೆ ಸತ್ತವರನ್ನು ಎಬ್ಬಿಸಿ ಬದುಕಿಸುತ್ತಾನೋ ಹಾಗೆಯೇ ಮಗನೂ ತನಗೆ ಇಷ್ಟವಿರು ವವರನ್ನು ಬದುಕಿಸುತ್ತಾನೆ.
22 ಇದಲ್ಲದೆ ತಂದೆಯು ಯಾರಿಗೂ ತೀರ್ಪು ಮಾಡುವದಿಲ್ಲ;

23 ಆದರೆ ಎಲ್ಲರೂ ತಂದೆಗೆ ಮಾನಕೊಡುವ
ಪ್ರಕಾರವೇ ಮಗನಿಗೂ ಮಾನ
ಕೊಡಬೇಕೆಂದು ತೀರ್ಪು ಮಾಡು ವದನ್ನೆಲ್ಲಾ
ಮಗನಿಗೆ ಒಪ್ಪಿಸಿದ್ದಾನೆ. ಮಗನಿಗೆ ಮಾನ
ಕೊಡದವನು ಆತನನ್ನು ಕಳುಹಿಸಿದ ತಂದೆಗೂ
ಮಾನ ಕೊಡದವನಾಗಿದ್ದಾನೆ.
24 ನಾನು ನಿಮಗೆ ನಿಜನಿಜವಾಗಿ
ಹೇಳುತ್ತೇನೆ, ನನ್ನ ವಾಕ್ಯವನ್ನು ಕೇಳಿ ನನ್ನನ್ನು
ಕಳುಹಿಸಿ ದಾತನನ್ನು ನಂಬುವವನು
ನಿತ್ಯಜೀವವನ್ನು ಹೊಂದಿ ದ್ದಾನೆ. ಅವನು
ತೀರ್ಪಿಗೆ ಗುರಿಯಾಗುವದಿಲ್ಲ; ಆದರೆ
ಮರಣದಿಂದ ಜೀವಕ್ಕೆ ದಾಟಿದ್ದಾನೆ.
25 ನಾನು ನಿಮಗೆ ನಿಜನಿಜವಾಗಿ

ಹೇಳುತ್ತೇನೆ, ಸತ್ತವರು ದೇವಕುಮಾರನ ಧ್ವನಿಯನ್ನು ಕೇಳುವ ಗಳಿಗೆ ಬರುತ್ತದೆ; ಅದು ಈಗಲೇ ಬಂದಿದೆ; ಕೇಳುವವರು ಬದುಕುವರು.
26 ತಂದೆಯು ಹೇಗೆ ಸ್ವತಃ ಜೀವವುಳ್ಳವನಾಗಿದ್ದಾನೋ ಹಾಗೆಯೇ ಮಗನೂ ಸ್ವತಃ ಜೀವವುಳ್ಳವನಾಗಿರುವಂತೆ ಆತನು ಅನುಗ್ರಹಿಸಿದ್ದಾನೆ.
27 ಆತನು ಮನುಷ್ಯಕುಮಾರ ನಾಗಿರುವದರಿಂದ ನ್ಯಾಯತೀರಿಸುವ ಅಧಿಕಾರವನ್ನು ಸಹ ಆತನಿಗೆ ಕೊಟ್ಟಿದ್ದಾನೆ.
28 ಇದಕ್ಕೆ ಆಶ್ಚರ್ಯಪಡ ಬೇಡಿರಿ; ಒಂದು ಕಾಲ ಬರುತ್ತದೆ; ಆಗ ಸಮಾಧಿಗಳಲ್ಲಿ

ರುವವರೆಲ್ಲರೂ ಆತನ ಧ್ವನಿಯನ್ನು ಕೇಳಿ ಹೊರಗೆ ಬರುವರು,
29 ಒಳ್ಳೇದನ್ನು ಮಾಡಿದವರು ಜೀವದ ಪುನರುತ್ಥಾನವನ್ನೂ ಕೆಟ್ಟದ್ದನ್ನು ಮಾಡಿದವರು ತೀರ್ಪಿನ ಪುನರುತ್ಥಾನವನ್ನೂ ಹೊಂದುವರು.
30 ನನ್ನಷ್ಟಕ್ಕೆ ನಾನೇ ಏನೂ ಮಾಡಲಾರೆನು; ನಾನು ಕೇಳುವಂತೆಯೇ ತೀರ್ಪು ಮಾಡುತ್ತೇನೆ ಮತ್ತು ನನ್ನ ತೀರ್ಪು ನ್ಯಾಯವಾದದ್ದು; ಯಾಕಂದರೆ ನಾನು ನನ್ನ ಸ್ವಂತಚಿತ್ತವನ್ನಲ್ಲ, ಆದರೆ ನನ್ನನ್ನು ಕಳುಹಿಸಿದ ತಂದೆಯ ಚಿತ್ತವು ನೆರವೇರ ಬೇಕೆಂದು ಅಪೇಕ್ಷಿಸುತ್ತೇನೆ.
31 ನನ್ನನ್ನು ಕುರಿತು ನಾನೇ ಸಾಕ್ಷಿ

ಹೇಳುವದಾದರೆ ನನ್ನ ಸಾಕ್ಷಿಯು
ನಿಜವಾದದ್ದಲ್ಲ.
32 ನನ್ನನ್ನು ಕುರಿತು ಸಾಕ್ಷಿಕೊಡುವಾತನು
ಬೇರೊಬ್ಬನಿ ದ್ದಾನೆ; ಆತನು ನನ್ನ
ವಿಷಯದಲ್ಲಿ ಕೊಡುವ ಸಾಕ್ಷಿಯು
ನಿಜವೆಂದು ನಾನು ಬಲ್ಲೆನು.
33 ನೀವು ಯೋಹಾನನ ಬಳಿಗೆ
ಕಳುಹಿಸಿದಿರಿ; ಅವನು ಸತ್ಯಕ್ಕೆ ಸಾಕ್ಷಿಕೊಟ್ಟನು.
34 ನಾನು ಮನುಷ್ಯನಿಂದ ಸಾಕ್ಷಿ
ಅಂಗೀಕರಿಸುವದಿಲ್ಲ; ಆದರೆ ನೀವು ರಕ್ಷಣೆ
ಹೊಂದುವಂತೆ ನಾನು ಇವು ಗಳನ್ನು
ಹೇಳುತ್ತೇನೆ.
35 ಅವನು ಉರಿದು ಪ್ರಕಾಶಿಸುವ

ದೀಪವಾಗಿದ್ದನು; ನೀವು ಸ್ವಲ್ಪಕಾಲ ಅವನ
ಬೆಳಕಿನಲ್ಲಿ ಸಂತೋಷಿಸುವದಕ್ಕೆ
ಮನಸ್ಸುಳ್ಳವರಾಗಿದ್ದೀರಿ;
36 ಆದರೆ ಯೋಹಾನನಿಗಿಂತಲೂ ಹೆಚ್ಚಿನ
ಸಾಕ್ಷಿ ನನಗುಂಟು; ಹೇಗೆಂದರೆ
ಪೂರೈಸುವದಕ್ಕಾಗಿ ತಂದೆಯು ನನಗೆ ಕೊಟ್ಟ
ಕೆಲಸಗಳು ಅಂದರೆ ನಾನು ಮಾಡುತ್ತಿರುವ
ಈ ಕೆಲಸಗಳೇ ತಂದೆಯು ನನ್ನನ್ನು
ಕಳುಹಿಸಿದ್ದಾನೆಂದು ನನ್ನ ವಿಷಯವಾಗಿ ಸಾಕ್ಷಿ
ಕೊಡುತ್ತವೆ.
37 ನನ್ನನ್ನು ಕಳುಹಿಸಿದ ತಂದೆಯು ತಾನೇ
ನನ್ನ ವಿಷಯದಲ್ಲಿ ಸಾಕ್ಷಿ ಹೇಳಿದ್ದಾನೆ; ನೀವು
ಎಂದಾದರೂ ಆತನ ಧ್ವನಿಯನ್ನು ಕೇಳಲಿಲ್ಲ

ಇಲ್ಲವೆ ಆತನ ರೂಪವನ್ನು ನೋಡಲಿಲ್ಲ.
38 ಆತನ ವಾಕ್ಯವು ನಿಮ್ಮಲ್ಲಿ
ನೆಲೆಯಾಗಿರುವದಿಲ್ಲ; ಯಾಕಂದರೆ ಆತನು
ಕಳುಹಿಸಿದಾತನನ್ನು ನೀವು ನಂಬು ವದಿಲ್ಲ.
39 ಬರಹಗಳನ್ನು ಪರಿಶೋಧಿಸಿರಿ;
ಅವುಗಳಲ್ಲಿ ನಿಮಗೆ ನಿತ್ಯಜೀವ ಉಂಟೆಂದು
ನೀವು ನೆನಸುತ್ತೀರಲ್ಲಾ; ಅವುಗಳೇ ನನ್ನ
ವಿಷಯವಾಗಿ ಸಾಕ್ಷಿಕೊಡುವವುಗಳಾ ಗಿವೆ.
40 ಆದರೆ ನೀವು ಜೀವವನ್ನು ಹೊಂದುವಂತೆ
ನನ್ನ ಬಳಿಗೆ ಬರುವದಿಲ್ಲ.
41 ನಾನು ಮನುಷ್ಯರಿಂದ ಮಾನವನ್ನು
ಅಂಗೀಕರಿ ಸುವದಿಲ್ಲ.
42 ಆದರೆ ನಾನು ನಿಮ್ಮನ್ನು ಬಲ್ಲೆನು, ನಿಮ್ಮಲ್ಲಿ

ದೇವರ ಪ್ರೀತಿ ಇಲ್ಲ.
43 ನಾನು ನನ್ನ ತಂದೆಯ ಹೆಸರಿನಲ್ಲಿ
ಬಂದಿದ್ದೇನೆ, ನೀವು ನನ್ನನ್ನು ಅಂಗೀಕರಿ
ಸುವದಿಲ್ಲ; ಮತ್ತೊಬ್ಬನು ತನ್ನ ಸ್ವಂತ ಹೆಸರಿನಲ್ಲಿ
ಬಂದರೆ ನೀವು ಅವನನ್ನು ಅಂಗೀಕರಿಸುವಿರಿ.
44 ದೇವರಿಂದ ಮಾತ್ರ ಬರುವ ಮಾನವನ್ನು
ಹುಡುಕದೆ ಒಬ್ಬರಿಂದೊಬ್ಬರಿಗೆ ಬರುವ
ಮಾನವನ್ನು ಹೊಂದುವ ನೀವು ಹೇಗೆ
ನಂಬೀರಿ?
45 ತಂದೆಯ ಮುಂದೆ ನಿಮ್ಮ ಮೇಲೆ ನಾನು
ತಪ್ಪು ಹೊರಿಸುವೆನೆಂದು ನೀವು ನೆನಸಬೇಡಿರಿ;
ಆದರೆ ನೀವು ನಂಬಿರುವ ಮೋಶೆಯೇ ನಿಮ್ಮ
ಮೇಲೆ ತಪ್ಪು ಹೊರಿಸುತ್ತಾನೆ.

46 ನೀವು ಮೋಶೆಯನ್ನು ನಂಬಿದ್ದರೆ
ನನ್ನನ್ನೂ ನಂಬುತ್ತಿದ್ದಿರಿ; ಯಾಕಂದರೆ ಅವನು
ನನ್ನ ವಿಷಯವಾಗಿ ಬರೆದನು.
47 ಅವನು ಬರೆದದ್ದನ್ನು ನೀವು ನಂಬದಿದ್ದರೆ
ನನ್ನ ಮಾತುಗಳನ್ನು ಹೇಗೆ ನಂಬಿರಿ ಅಂದನು.

## ಅಧ್ಯಾಯ 6

1 ಇವುಗಳಾದ ಮೇಲೆ ಯೇಸು ತಿಬೇರಿ
ಯವೆಂಬ ಗಲಿಲಾಯ ಸಮುದ್ರದ ಆಚೆಗೆ
ಹೋದನು.
2 ಆಗ ಆತನು ರೋಗಿಗಳಲ್ಲಿ ನಡಿಸಿದ ಆತನ
ಅದ್ಭುತ ಕಾರ್ಯಗಳನ್ನು ನೋಡಿದ ಜನರ

ದೊಡ್ಡ ಸಮೂಹವು ಆತನನ್ನು
ಹಿಂಬಾಲಿಸುತ್ತಿತ್ತು.
3 ಯೇಸು ಬೆಟ್ಟವನ್ನೇರಿ ಅಲ್ಲಿ ತನ್ನ
ಶಿಷ್ಯರೊಂದಿಗೆ ಕೂತು ಕೊಂಡನು.
4 ಆಗ ಯೆಹೂದ್ಯರ ಪಸ್ಕ ಹಬ್ಬವು
ಸವಿಾಪವಾಗಿತ್ತು.
5 ಜನರ ದೊಡ್ಡ ಗುಂಪು ತನ್ನ ಕಡೆಗೆ
ಬರುವದನ್ನು ಯೇಸು ಕಣ್ಣೆತ್ತಿ ನೋಡಿ ಫಿಲಿಪ್ಪ
ನಿಗೆ--ಇವರು ಊಟ ಮಾಡುವಂತೆ ನಾವು
ರೊಟ್ಟಿಯನ್ನು ಎಲ್ಲಿಂದ ಕೊಂಡು ತರೋಣ
ಅಂದನು.
6 ಅವ ನನ್ನು ಪರೀಕ್ಷಿಸುವದಕ್ಕಾಗಿ ಆತನು
ಇದನ್ನು ಹೇಳಿದನು; ಯಾಕಂದರೆ ತಾನು

ಮಾಡಬೇಕೆಂದಿದ್ದದ್ದು ಆತನು ತಾನೇ ತಿಳಿದವನಾಗಿದ್ದನು.
7 ಫಿಲಿಪ್ಪನು ಪ್ರತ್ಯುತ್ತರ ವಾಗಿ ಆತನಿಗೆ--ಇವರಲ್ಲಿ ಪ್ರತಿಯೊಬ್ಬನು ಸ್ವಲ್ಪ ಸ್ವಲ್ಪ ತಿಂದರೂ ಇನ್ನೂರು ಹಣಗಳಷ್ಟು ರೊಟ್ಟಿಗಳು ಅವ ರಿಗೆ ಸಾಲುವದಿಲ್ಲ ಅಂದನು.
8 ಆಗ ಆತನ ಶಿಷ್ಯರಲ್ಲಿ ಒಬ್ಬನಾಗಿರುವ ಸೀಮೋನ್ ಪೇತ್ರನ ಸಹೋದರನಾದ ಅಂದ್ರೆಯನು ಆತನಿಗೆ--
9 ಇಲ್ಲಿ ಒಬ್ಬ ಹುಡುಗನಿ ದ್ದಾನೆ; ಅವನಲ್ಲಿ ಐದು ಜವೆಗೋದಿಯ ರೊಟ್ಟಿಗಳೂ ಎರಡು ಸಣ್ಣ ಮೀನುಗಳೂ ಅವೆ; ಆದರೆ ಇಷ್ಟೊಂದು ಜನರಿಗೆ ಅವು ಯಾತಕ್ಕಾದಾವು ಅಂದನು.

10 ಆಗ ಯೇಸು--ಜನರನ್ನು ಕೂಡ್ರಿಸಿರಿ
ಅಂದನು. ಆ ಸ್ಥಳ ದಲ್ಲಿ ಬಹಳ ಹುಲ್ಲು
ಇರಲಾಗಿ ಜನರೆಲ್ಲರು ಕುಳಿತು ಕೊಂಡರು
ಅವರಲ್ಲಿ ಸುಮಾರು ಐದು ಸಾವಿರ
ಪುರುಷರೇ ಇದ್ದರು.
11 ತರುವಾಯ ಯೇಸು ರೊಟ್ಟಿ ಗಳನ್ನು
ತೆಗೆದುಕೊಂಡು ಸ್ತೋತ್ರಮಾಡಿ ಶಿಷ್ಯರಿಗೆ
ಹಂಚಿದನು; ಅವರು ಕುಳಿತುಕೊಂಡವರಿಗೆ
ಹಂಚಿ ದರು; ಅದೇ ರೀತಿಯಲ್ಲಿ
ವಿಾನುಗಳನ್ನು ಅವರಿಗೆ ಬೇಕಾದಷ್ಟು
ಹಂಚಿದರು.
12 ಅವರಿಗೆ ತೃಪ್ತಿಯಾದ ಮೇಲೆ ಯೇಸು
ತನ್ನ ಶಿಷ್ಯರಿಗೆ--ಏನೂ ನಷ್ಟವಾಗ ದಂತೆ ಮಿಕ್ಕಿದ

ತುಂಡುಗಳನ್ನು ಕೂಡಿಸಿರಿ ಅಂದನು.
13 ಆದದರಿಂದ ಅವರು ಐದು
ಜವೆಗೋದಿಯ ರೊಟ್ಟಿಗಳಲ್ಲಿ ತಿಂದವರಿಂದ
ಮಿಕ್ಕಿದ ತುಂಡುಗಳನ್ನು ಕೂಡಿಸಿ ಹನ್ನೆರಡು
ಪುಟ್ಟಿಗಳಲ್ಲಿ ತುಂಬಿದರು.
14 ಬಳಿಕ ಆ ಜನರು ಯೇಸು ಮಾಡಿದ
ಅದ್ಭುತ ಕಾರ್ಯವನ್ನು ನೋಡಿ--
ನಿಜವಾಗಿಯೂ ಲೋಕಕ್ಕೆ ಬರಬೇಕಾಗಿದ್ದ ಆ
ಪ್ರವಾದಿಯು ಈತನೇ ಅಂದರು.
15 ಆದದರಿಂದ ಅವರು ಬಂದು ತನ್ನನ್ನು
ಒತ್ತಾಯ ದಿಂದ ತೆಗೆದುಕೊಂಡು ಹೋಗಿ
ಅರಸನನ್ನಾಗಿ ಮಾಡ ಬೇಕೆಂದಿದ್ದಾರೆಂದು
ಯೇಸು ತಿಳಿದು ಅಲ್ಲಿಂದ ತಿರಿಗಿ ತಾನೊಬ್ಬನೇ

ಒಂಟಿಗನಾಗಿ ಒಂದು ಬೆಟ್ಟಕ್ಕೆ ಹೊರಟು
ಹೋದನು.
16 ಸಾಯಂಕಾಲವಾದಾಗ ಆತನ ಶಿಷ್ಯರು
ಸಮುದ್ರಕ್ಕೆ ಹೊರಟುಹೋಗಿ
17 ದೋಣಿಯನ್ನು ಹತ್ತಿ
ಸಮುದ್ರಮಾರ್ಗವಾಗಿ ಕಪೆರ್ನೌಮಿಗೆ
ಹೋಗುತ್ತಿ ದ್ದರು. ಆಗಲೇ ಕತ್ತಲಾಗಿತ್ತು ,
ಯೇಸು ಅವರ ಬಳಿಗೆ ಬಂದಿರಲಿಲ್ಲ.
18 ಆಗ ಬಲವಾದ ಗಾಳಿಯು ಬೀಸಿದ್ದ ರಿಂದ
ಸಮುದ್ರವು ಅಲ್ಲಕಲ್ಲೋಲವಾಯಿತು.
19 ಹೀಗೆ ಅವರು ಹುಟ್ಟು ಹಾಕುತ್ತಾ ಒಂದು
ಹರದಾರಿಯಷ್ಟು ದೂರ ಹೋದ ಮೇಲೆ
ಯೇಸು ಸಮುದ್ರದ ಮೇಲೆ ನಡೆದು ತಮ್ಮ

ದೋಣಿಯ ಕಡೆಗೆ ಸಮೀಪಿಸುತ್ತಿರುವದನ್ನು
ಅವರು ಕಂಡು ಭಯಪಟ್ಟರು.
20 ಆದರೆ ಆತನು ಅವರಿಗೆ--ನಾನೇ,
ಭಯಪಡಬೇಡಿರಿ ಅಂದನು.
21 ಆಗ ಅವರು ಮನಃಪೂರ್ವಕವಾಗಿ
ಆತನನ್ನು ದೋಣಿಯಲ್ಲಿ ಸೇರಿಸಿಕೊಂಡರು;
ಕೂಡಲೆ ದೋಣಿಯು ಅವರು
ಹೋಗುವದಕ್ಕಿದ್ದ ದಡಕ್ಕೆ ಸೇರಿತು.
22 ಆತನ ಶಿಷ್ಯರು ಹತ್ತಿದ ಒಂದೇ
ದೋಣಿಯ ಹೊರತು ಮತ್ತೊಂದು ಅಲ್ಲಿ
ಇರಲಿಲ್ಲವೆಂದೂ ಆತನ ಶಿಷ್ಯರು ಮಾತ್ರ
ಹೋದರೆಂದೂ ಯೇಸು ತನ್ನ ಶಿಷ್ಯರ ಸಂಗಡ
ದೋಣಿಯಲ್ಲಿ ಹೋಗಲಿಲ್ಲವೆಂದೂ ಮರು

ದಿನ ಸಮುದ್ರದ ಆಚೆಯಲ್ಲಿ ನಿಂತಿದ್ದ ಜನರು ನೋಡಿ ದ್ದರು.
23 (ಆದಾಗ್ಯೂ ಕರ್ತನು ಸ್ತೋತ್ರ ಮಾಡಿದ ನಂತರ ಅವರು ರೊಟ್ಟಿಯನ್ನು ತಿಂದ ಸ್ಥಳದ ಸವಿಾಪಕ್ಕೆ ತಿಬೇರಿಯದಿಂದ ಬೇರೆ ದೋಣಿಗಳು ಬಂದವು).
24 ಆಗ ಯೇಸು ಮತ್ತು ಆತನ ಶಿಷ್ಯರು ಅಲ್ಲಿ ಇಲ್ಲದಿರುವದನ್ನು ಜನರು ನೋಡಿ ಅವರು ಸಹ ದೋಣಿಗಳಲ್ಲಿ ಹತ್ತಿ ಯೇಸುವನ್ನು ಹುಡುಕುತ್ತಾ ಕಪೆರ್ನೌಮಿಗೆ ಬಂದರು.
25 ಅವರು ಆತನನ್ನು ಸಮು ದ್ರದ ಆಚೇಕಡೆಯಲ್ಲಿ ಕಂಡು ಆತನಿಗೆ--ರಬ್ಬಿಯೇ, ನೀನು ಇಲ್ಲಿಗೆ ಯಾವಾಗ ಬಂದಿ ಅಂದರು.

26 ಯೇಸು ಪ್ರತ್ಯುತ್ತರವಾಗಿ ಅವರಿಗೆ--ನಾನು
ನಿಮಗೆ ನಿಜನಿಜ ವಾಗಿ ಹೇಳುತ್ತೇನೆ, ನೀವು
ನನ್ನನ್ನು ಹುಡುಕುವದು
ಅದ್ಭುತಕಾರ್ಯಗಳನ್ನು ನೋಡಿದ್ದರಿಂದಲ್ಲ,
ಆದರೆ ರೊಟ್ಟಿಗಳನ್ನು ತಿಂದು ತೃಪ್ತಿ
ಹೊಂದಿದ್ದರಿಂದಲೇ.
27 ನಾಶವಾಗುವ ಆಹಾರಕ್ಕಾಗಿ ಅಲ್ಲ,
ನಿತ್ಯಜೀವ ವನ್ನುಂಟು ಮಾಡುವ
ಆಹಾರಕ್ಕೋಸ್ಕರ ದುಡಿಯಿರಿ; ಅದನ್ನು
ಮನುಷ್ಯಕುಮಾರನು ನಿಮಗೆ ಕೊಡುವನು;
ತಂದೆಯಾದ ದೇವರು (ಇದಕ್ಕಾಗಿ) ಆತನಿಗೆ
ಮುದ್ರೆ ಹಾಕಿದ್ದಾನೆ ಅಂದನು.
28 ಆಗ ಅವರು ಆತನಿಗೆ--ನಾವು ದೇವರ

ಕ್ರಿಯೆ ಗಳನ್ನು ಮಾಡುವಂತೆ ಏನು ಮಾಡಬೇಕು ಎಂದು ಕೇಳಿದ್ದಕ್ಕೆ
29 ಯೇಸು ಪ್ರತ್ಯುತ್ತರವಾಗಿ ಅವರಿಗೆ--ದೇವರಕ್ರಿಯೆ ಯಾವದಂದರೆ, ಆತನು ಕಳುಹಿಸಿ ಕೊಟ್ಟಾತನನ್ನು ನೀವು ನಂಬುವದೇ ಅಂದನು.
30 ಅದಕ್ಕೆ ಅವರು ಆತನಿಗೆ--ಹಾಗಾದರೆ ನಾವು ನೋಡಿ ನಿನ್ನನ್ನು ನಂಬುವಂತೆ ಯಾವ ಸೂಚಕ ಕಾರ್ಯವನ್ನು ನಮಗೆ ತೋರಿಸುತ್ತೀ? ನೀನು ಯಾವ ಕ್ರಿಯೆಯನ್ನು ಮಾಡುತ್ತೀ?
31 ತಿನ್ನುವದಕ್ಕಾಗಿ ಆತನು ಅವರಿಗೆ ಪರಲೋಕದಿಂದ ರೊಟ್ಟಿಯನ್ನು ಕೊಟ್ಟನು

ಎಂದು ಬರೆದಿರುವ ಪ್ರಕಾರ ನಮ್ಮ ಪಿತೃಗಳು
ಅಡವಿ ಯಲ್ಲಿ ಮನ್ನಾ ತಿಂದರು ಎಂದು
ಹೇಳಿದರು.
32 ಆಗ ಯೇಸು ಅವರಿಗೆ--ನಾನು ನಿಮಗೆ
ನಿಜನಿಜವಾಗಿ ಹೇಳುತ್ತೇನೆ. ಮೋಶೆಯು
ನಿಮಗೆ ಪರಲೋಕದಿಂದ ರೊಟ್ಟಿ ಕೊಡಲಿಲ್ಲ;
ಆದರೆ ನನ್ನ ತಂದೆಯು ನಿಮಗೆ ನಿಜವಾದ
ರೊಟ್ಟಿಯನ್ನು ಪರಲೋಕದಿಂದ ಕೊಡು
ತ್ತಾನೆ.
33 ಪರಲೋಕದಿಂದ ಕೆಳಗೆ ಬಂದು ಲೋಕಕ್ಕೆ
ಜೀವವನ್ನು ಕೊಡುವಾತನೇ ದೇವರ
ರೊಟ್ಟಿಯಾಗಿದ್ದಾನೆ ಅಂದನು.
34 ಅದಕ್ಕವರು ಆತನಿಗೆ--ಕರ್ತನೇ, ಈ

ರೊಟ್ಟಿಯನ್ನು ನಮಗೆ ಯಾವಾಗಲೂ
ಕೊಡು ಅಂದರು.
35 ಆದಕ್ಕೆ ಯೇಸು ಅವರಿಗೆ--ನಾನೇ ಆ
ಜೀವದ ರೊಟ್ಟಿ; ನನ್ನ ಬಳಿಗೆ ಬರುವವನಿಗೆ
ಎಂದಿಗೂ ಹಸಿವೆಯಾಗುವದಿಲ್ಲ ಮತ್ತು ನನ್ನ
ಮೇಲೆ ನಂಬಿಕೆ ಇಡುವವನಿಗೆ ಎಂದಿಗೂ
ನೀರಡಿಕೆಯಾಗುವದಿಲ್ಲ.
36 ಆದರೆ--ನೀವು ನನ್ನನ್ನು ನೋಡಿಯೂ
ನಂಬಲಿಲ್ಲ ಎಂದು ನಾನು ನಿಮಗೆ
ಹೇಳಿದೆನು.
37 ತಂದೆಯು ನನಗೆ
ಕೊಡುವಂಥವರೆಲ್ಲರೂ ನನ್ನ ಬಳಿಗೆ ಬರು
ವರು; ನನ್ನ ಬಳಿಗೆ ಬರುವವನನ್ನು ನಾನು

ಹೊರಗೆ ತಳ್ಳಿಬಿಡುವದೇ ಇಲ್ಲ.
38 ನಾನು ನನ್ನ ಸ್ವಂತ ಚಿತ್ತವನ್ನಲ್ಲ; ಆದರೆ ನನ್ನನ್ನು ಕಳುಹಿಸಿದಾತನ ಚಿತ್ತವನ್ನೇ ಮಾಡುವದಕ್ಕೆ ಪರಲೋಕದಿಂದ ಬಂದೆನು.
39 ನನ್ನನ್ನು ಕಳುಹಿಸಿದ ತಂದೆಯ ಚಿತ್ತವೇನಂದರೆ, ಆತನು ನನಗೆ ಕೊಟ್ಟವರಲ್ಲಿ ನಾನು ಒಬ್ಬನನ್ನೂ ಕಳಕೊಳ್ಳದೆ ಕಡೇ ದಿನದಲ್ಲಿ ಅವನನ್ನು ತಿರಿಗಿ ಎಬ್ಬಿಸುವದೇ.
40 ನನ್ನನ್ನು ಕಳುಹಿಸದಾತನ ಚಿತ್ತವೇನಂದರೆ, ಮಗನನ್ನು ನೋಡಿ ಆತನ ಮೇಲೆ ನಂಬಿಕೆ ಇಡುವ ಪ್ರತಿಯೊಬ್ಬನು ನಿತ್ಯ ಜೀವವನ್ನು ಹೊಂದುವದೇ; ನಾನು ಅವನನ್ನು ಕಡೇ ದಿನದಲ್ಲಿ ಎಬ್ಬಿಸುವೆನು ಎಂದು ಹೇಳಿದನು.

41 ಪರಲೋಕದಿಂದ ಇಳಿದು ಬಂದ ರೊಟ್ಟಿ
ನಾನೇ ಎಂದು ಆತನು ಹೇಳಿದ್ದಕ್ಕೆ
ಯೆಹೂದ್ಯರು ಆತನ ವಿಷಯವಾಗಿ
ಗುಣುಗುಟ್ಟಿ--
42 ಇವನು ಯೋಸೇಫನ ಮಗನಾದ
ಯೇಸು ಅಲ್ಲವೇ? ಇವನ ತಂದೆ ತಾಯಿ
ಗಳನ್ನು ನಾವು ಬಲ್ಲೆವಲ್ಲವೇ? ಹಾಗಾದರೆ--
ನಾನು ಪರಲೋಕದಿಂದ ಇಳಿದು ಬಂದೆನು
ಎಂದು ಇವನು ಹೇಳುವದು ಹೇಗೆ ಅಂದರು.
43 ಯೇಸು ಪ್ರತ್ಯುತ್ತರ ವಾಗಿ ಅವರಿಗೆ--ನಿಮ್ಮ
ನಿಮ್ಮೊಳಗೆ ಗುಣುಗುಟ್ಟ ಬೇಡಿರಿ.
44 ನನ್ನನ್ನು ಕಳುಹಿಸಿದ ತಂದೆಯು
ಎಳೆಯದ ಹೊರತು ಯಾವನೂ ನನ್ನ ಬಳಿಗೆ

ಬರಲಾರನು. ನಾನು ಅವನನ್ನು ಕಡೇ
ದಿನದಲ್ಲಿ ಎಬ್ಬಿಸುವೆನು.
45 ಅವರೆಲ್ಲರು ದೇವರಿಂದ
ಬೋಧಿಸಲ್ಪಡುವರೆಂದು ಪ್ರವಾದನೆಗಳಲ್ಲಿ
ಬರೆಯಲ್ಪಟ್ಟಿದೆ. ಆದಕಾರಣ ತಂದೆಯಿಂದ
ಕೇಳಿ ಕಲಿತ ಪ್ರತಿಯೊಬ್ಬ ಮನುಷ್ಯನು ನನ್ನ
ಬಳಿಗೆ ಬರುತ್ತಾನೆ.
46 ದೇವರಿಗೆ ಸಂಬಂಧಪಟ್ಟ ವನೇ
ತಂದೆಯನ್ನು ನೋಡಿದ್ದಾನೆ ಹೊರತು ಬೇರೆ
ಯಾವನೂ ತಂದೆಯನ್ನು ನೋಡಲಿಲ್ಲ.
47 ನಾನು ನಿಮಗೆ ನಿಜನಿಜವಾಗಿ
ಹೇಳುತ್ತೇನೆ--ನನ್ನ ಮೇಲೆ ನಂಬಿಕೆ
ಇಡುವವನು ನಿತ್ಯಜೀವವನ್ನು ಹೊಂದಿದ್ದಾನೆ.

48 ನಾನೇ ಆ ಜೀವದ ರೊಟ್ಟಿಯಾಗಿದ್ದೇನೆ.
49 ನಿಮ್ಮ ಪಿತೃಗಳು ಅಡವಿಯಲ್ಲಿ ಮನ್ನಾ ತಿಂದಾಗ್ಯೂ ಸತ್ತು ಹೋದರು.
50 ಮನುಷ್ಯನು ತಿಂದು ಸಾಯದೇ ಇರುವಂತೆ ಪರಲೋಕದಿಂದ ಕೆಳಗೆ ಇಳಿದು ಬಂದ ರೊಟ್ಟಿ ಇದೇ.
51 ಪರಲೋಕದಿಂದ ಇಳಿದುಬಂದ ಜೀವದ ರೊಟ್ಟಿಯು ನಾನೇ; ಈ ರೊಟ್ಟಿಯನ್ನು ಯಾವನಾದರೂ ತಿಂದರೆ ಅವನು ಎಂದೆಂದಿಗೂ ಬದುಕುವನು; ನಾನು ಕೊಡುವ ರೊಟ್ಟಿಯು ನನ್ನ ಮಾಂಸವೇ; ಅದನ್ನು ನಾನು ಲೋಕದ ಜೀವಕ್ಕಾಗಿ ಕೊಡುವೆನು ಅಂದನು.

52 ಇದರಿಂದ ಯೆಹೂದ್ಯರು ತಮ್ಮತಮ್ಮೊಳಗೆ
ವಾಗ್ವಾದ ಮಾಡುತ್ತಾ--ಈ ಮನುಷ್ಯನು ತನ್ನ
ಮಾಂಸ ವನ್ನು ತಿನ್ನುವದಕ್ಕೆ ನಮಗೆ ಹೇಗೆ
ಕೊಡುತ್ತಾನೆ ಅಂದರು.
53 ಆಗ ಯೇಸು ಅವರಿಗೆ--ನಿಮಗೆ ನಿಜ
ನಿಜವಾಗಿ ಹೇಳುತ್ತೇನೆ, ನೀವು
ಮನುಷ್ಯಕುಮಾರನ ಮಾಂಸವನ್ನು ತಿಂದು
ಆತನ ರಕ್ತವನ್ನು ಕುಡಿಯದ ಹೊರತು
ನಿಮ್ಮೊಳಗೆ ಜೀವವಿಲ್ಲ.
54 ಯಾವನು ನನ್ನ ಮಾಂಸವನ್ನು ತಿಂದು
ನನ್ನ ರಕ್ತವನ್ನು ಕುಡಿಯುತ್ತಾನೋ ಅವನು
ನಿತ್ಯಜೀವವನ್ನು ಹೊಂದಿದ್ದಾನೆ; ನಾನು ಅವ
ನನ್ನು ಕಡೇ ದಿನದಲ್ಲಿ ಎಬ್ಬಿಸುವೆನು.

55 ಯಾಕಂದರೆ ನನ್ನ ಮಾಂಸವು ನಿಜವಾದ
ಆಹಾರವೂ ನನ್ನ ರಕ್ತವು ನಿಜವಾದ ಪಾನವೂ
ಆಗಿದೆ.
56 ಯಾವನು ನನ್ನ ಮಾಂಸವನ್ನು ತಿಂದು
ನನ್ನ ರಕ್ತವನ್ನು ಕುಡಿಯುತ್ತಾನೋ ಅವನು
ನನ್ನಲ್ಲಿ ವಾಸಿಸುತ್ತಾನೆ; ನಾನು ಅವನಲ್ಲಿ ವಾಸಿ
ಸುತ್ತೇನೆ.
57 ಜೀವವುಳ್ಳ ತಂದೆಯು ನನ್ನನ್ನು ಕಳುಹಿಸಿ
ರಲಾಗಿ ನಾನು ತಂದೆಯ ಮೂಲಕ
ಜೀವಿಸುವಂತೆಯೇ ನನ್ನನ್ನು ತಿನ್ನುವವನು
ನನ್ನ ಮೂಲಕವಾಗಿಯೇ ಜೀವಿ ಸುವನು.
58 ಪರಲೋಕದಿಂದ ಇಳಿದು ಬಂದ
ರೊಟ್ಟಿಯು ಇದೆ; ನಿಮ್ಮ ಪಿತೃಗಳು ಮನ್ನಾ

ತಿಂದಾಗ್ಯೂ ಸತ್ತುಹೋದಂತೆ ಅಲ್ಲ; ಆದರೆ ಈ
ರೊಟ್ಟಿಯನ್ನು ತಿನ್ನುವವನು ಎಂದೆಂದಿಗೂ
ಜೀವಿಸುವನು ಅಂದನು.
59 ಕಪೆರ್ನೌಮಿನಲ್ಲಿ ಬೋಧಿಸುತ್ತಿರುವಾಗ
ಸಭಾ ಮಂದಿರದಲ್ಲಿ ಆತನು ಇವುಗಳನ್ನು
ಹೇಳಿದನು.
60 ಆದದರಿಂದ ಆತನ ಶಿಷ್ಯರಲ್ಲಿ ಅನೇಕರು
ಇದನ್ನು ಕೇಳಿ--ಇದು ಕಠಿಣವಾದ ಮಾತು;
ಇದನ್ನು ಯಾರು ಕೇಳಾರು ಅಂದರು.
61 ತನ್ನ ಶಿಷ್ಯರೂ ಇದಕ್ಕೆ ಗುಣು
ಗುಟ್ಟುತ್ತಾರೆಂದು ಯೇಸು ತನ್ನಲ್ಲಿ
ತಿಳಿದುಕೊಂಡು ಅವರಿಗೆ--ಇದು ನಿಮಗೆ
ಅಭ್ಯಂತರವಾಯಿತೋ?

62 ಹಾಗಾದರೆ ಮನುಷ್ಯಕುಮಾರನು ತಾನು ಮೊದಲು ಇದ್ದಲ್ಲಿಗೆ ಏರಿಹೋಗುವದನ್ನು ನೀವು ನೋಡಿದರೆ ಏನನ್ನುವಿರಿ?
63 ಬದುಕಿಸುವಂಥದ್ದು ಆತ್ಮವೇ; ಮಾಂಸವು ಯಾವದಕ್ಕೂ ಪ್ರಯೋಜನವಾಗುವದಿಲ್ಲ; ನಾನು ನಿಮಗೆ ಹೇಳುವ ಮಾತುಗಳೇ ಆತ್ಮವಾಗಿಯೂ ಜೀವವಾಗಿಯೂ ಇವೆ.
64 ಆದರೆ ನಂಬದವರು ಕೆಲವರು ನಿಮ್ಮಲ್ಲಿ ಇದ್ದಾರೆ ಅಂದನು. ಯಾಕಂದರೆ ನಂಬದವರು ಯಾರೆಂದೂ ತನ್ನನ್ನು ಹಿಡುಕೊಡು ವವನು ಯಾರೆಂದೂ ಮೊದಲಿನಿಂದಲೇ ಯೇಸು ತಿಳಿದಿದ್ದನು.
65 ಆತನು--ನನ್ನ ತಂದೆಯಿಂದ ಒಬ್ಬನಿಗೆ

ಕೊಡಲ್ಪಟ್ಟ ಹೊರತು ಯಾವನೂ ನನ್ನ ಬಳಿಗೆ
ಬರ ಲಾರನು; ಇದಕ್ಕೋಸ್ಕರವೇ ನಾನು
ನಿಮಗೆ ಹೇಳಿದೆನು ಅಂದನು.
66 ಅಂದಿನಿಂದ ಆತನ ಶಿಷ್ಯರಲ್ಲಿ ಅನೇಕರು
ಹಿಂದಕ್ಕೆ ಹೊರಟುಹೋಗಿ ಮತ್ತೆ ಅವರು
ಆತನ ಸಂಗಡ ಎಂದಿಗೂ ಸಂಚರಿಸಲೇ ಇಲ್ಲ.
67 ಆಗ ಯೇಸು ಹನ್ನೆರಡು ಮಂದಿಗೆ--
ನೀವು ಸಹ ಹೊರಟು ಹೋಗಬೇಕೆಂ
ದಿದ್ದೀರೋ ಎಂದು ಕೇಳಲು
68 ಸೀಮೋನ್ ಪೇತ್ರನು ಪ್ರತ್ಯುತ್ತರವಾಗಿ
ಆತನಿಗೆ--ಕರ್ತನೇ, ನಾವು ಯಾರ ಬಳಿಗೆ
ಹೋಗೋಣ? ನಿನ್ನಲ್ಲಿ ನಿತ್ಯಜೀವದ ವಾಕ್ಯಗಳು
ಉಂಟಲ್ಲಾ.

69 ನೀನು ಜೀವವುಳ್ಳ ದೇವರಮಗನಾದ ಆ
ಕ್ರಿಸ್ತನೆಂದು ನಾವು ಖಂಡಿತವಾಗಿ ನಂಬಿದ್ದೇವೆ
ಅಂದನು.
70 ಅದಕ್ಕೆ ಯೇಸು ಪ್ರತ್ಯುತ್ತರವಾಗಿ ಅವ
ರಿಗೆ--ಹನ್ನೆರಡು ಮಂದಿಯಾದ ನಿಮ್ಮನ್ನು
ನಾನು ಆರಿಸಿ ಕೊಂಡೆನಲ್ಲವೇ? ಆದರೆ
ನಿಮ್ಮಲ್ಲಿ ಒಬ್ಬನು ಸೈತಾನನಾ ಗಿದ್ದಾನೆ
ಅಂದನು.
71 ಸೀಮೋನನ ಮಗನಾದ ಇಸ್ಕರಿಯೋತ್
ಯೂದನ ವಿಷಯವಾಗಿ ಆತನು ಹೇಳಿ
ದನು. ಯಾಕಂದರೆ ಹನ್ನೆರಡು ಮಂದಿಯಲ್ಲಿ
ಒಬ್ಬನಾದ ಇವನು ಆತನನ್ನು
ಹಿಡುಕೊಡುವದಕ್ಕಿದ್ದನು.

ಅಧ್ಯಾಯ 7

1 ಇವುಗಳಾದ ಮೇಲೆ ಯೇಸು ಗಲಿಲಾ
ಯದಲ್ಲಿ ಸಂಚಾರ ಮಾಡಿದನು;
ಯೆಹೂದ್ಯರು ಆತನನ್ನು ಕೊಲ್ಲುವದಕ್ಕೆ
ಹುಡುಕುತ್ತಿ ದ್ದದರಿಂದ ಯೂದಾಯದಲ್ಲಿ
ಸಂಚರಿಸಲು ಆತನಿಗೆ ಮನಸ್ಸಿರಲಿಲ್ಲ.
2 ಆಗ ಯೆಹೂದ್ಯರ ಗುಡಾರಗಳ ಹಬ್ಬವು
ಹತ್ತಿರವಾಗಿತ್ತು.
3 ಆದದರಿಂದ ಆತನ ಸಹೋದರರು
ಆತನಿಗೆ--ನೀನು ಮಾಡುವ ಕ್ರಿಯೆಗಳನ್ನು
ನಿನ್ನ ಶಿಷ್ಯರು ಸಹ ನೋಡುವಂತೆ ಇಲ್ಲಿಂದ

ಹೊರಟು ಯೂದಾಯಕ್ಕೆ ಹೋಗು;
4 ಯಾಕಂದರೆ ತಾನು ಪ್ರಸಿದ್ಧಿಗೆ
ಬರಬೇಕೆಂದಿರುವ ಯಾವನಾದರೂ
ರಹಸ್ಯವಾಗಿ ಯಾವದನ್ನೂ ಮಾಡುವದಿಲ್ಲ;
ನೀನು ಇವುಗಳನ್ನು ಮಾಡುವದಾದರೆ
ಲೋಕಕ್ಕೆ ನಿನ್ನನ್ನು ನೀನೇ ತೋರ್ಪಡಿಸಿಕೋ
ಅಂದರು.
5 ಯಾಕಂದರೆ ಆತನ ಸಹೋದರರು ಸಹ
ಆತನ ಮೇಲೆ ನಂಬಿಕೆ ಇಟ್ಟಿರಲಿಲ್ಲ.
6 ತರುವಾಯ ಯೇಸು ಅವರಿಗೆ-- ನನ್ನ
ಸಮಯವು ಇನ್ನೂ ಬಂದಿಲ್ಲ; ಆದರೆ ನಿಮ್ಮ
ಸಮಯವು ಯಾವಾಗಲೂ ಸಿದ್ಧವಾಗಿದೆ.
7 ಲೋಕವು ನಿಮ್ಮನ್ನು ಹಗೆಮಾಡಲಾರದು;

ಆದರೆ ಅದರ ಕ್ರಿಯೆಗಳು ಕೆಟ್ಟವುಗಳಾಗಿವೆ ಎಂದು ಅದರ ವಿಷಯ ದಲ್ಲಿ ನಾನು ಸಾಕ್ಷಿ ಹೇಳುವದರಿಂದ ಅದು ನನ್ನನ್ನು ಹಗೆಮಾಡುತ್ತದೆ.
8 ನೀವು ಈ ಹಬ್ಬಕ್ಕೆ ಹೋಗಿರಿ; ನಾನು ಈ ಹಬ್ಬಕ್ಕೆ ಈಗಲೇ ಹೋಗುವದಿಲ್ಲ, ಯಾಕಂದರೆ ನನ್ನ ಸಮಯವು ಇನ್ನೂ ಪೂರ್ಣವಾಗಿ ಬರಲಿಲ್ಲ ಅಂದನು.
9 ಆತನು ಈ ಮಾತುಗಳನ್ನು ಅವರಿಗೆ ಹೇಳಿದ್ದಾದ ಮೇಲೆ ಇನ್ನೂ ಗಲಿಲಾಯ ದಲ್ಲಿಯೇ ಉಳಿದನು.
10 ಆದರೆ ಆತನ ಸಹೋದರರು ಹೋದಮೇಲೆ ಆತನು ಸಹ ಹಬ್ಬಕ್ಕೆ

ಬಹಿರಂಗವಾಗಿ ಹೋಗದೆ ಗುಪ್ತವಾಗಿ
ಹೋದನು.
11 ಆಗ ಯೆಹೂದ್ಯರು ಆ ಹಬ್ಬದಲ್ಲಿ
ಆತನನ್ನು ಹುಡುಕಿ--ಆತನು ಎಲ್ಲಿದ್ದಾನೆ
ಅಂದರು.
12 ಆ ಜನಗಳಲ್ಲಿ ಆತನ ವಿಷಯವಾಗಿ
ಬಹಳ ಗುಣುಗುಟ್ಟುವಿಕೆ ಇತ್ತು; ಯಾಕಂದರೆ
ಕೆಲವರು--ಆತನು ಒಬ್ಬ ಒಳ್ಳೇ
ಮನುಷ್ಯನಾಗಿದ್ದಾನೆ ಅಂದರು; ಬೇರೆ
ಕೆಲವರು--ಅಲ್ಲ; ಆತನು ಜನರನ್ನು ಮೋಸ
ಗೊಳಿಸುತ್ತಾನೆ ಎಂದು ಅನ್ನುತ್ತಿದ್ದರು.
13 ಆದಾಗ್ಯೂ ಯೆಹೂದ್ಯರ ಭಯದ ನಿಮಿತ್ತ
ಆತನ ವಿಷಯದಲ್ಲಿ ಯಾರೂ

ಬಹಿರಂಗವಾಗಿ ಮಾತನಾಡಲಿಲ್ಲ.
14 ಆಗ ಯೇಸು ಆ ಹಬ್ಬದ ಮಧ್ಯದಲ್ಲಿ
ದೇವಾ ಲಯದೊಳಗೆ ಹೋಗಿ
ಬೋಧಿಸಿದನು.
15 ಯೆಹೂ ದ್ಯರು ಆಶ್ಚರ್ಯಪಟ್ಟು--
ಏನನ್ನೂ ಕಲಿಯದಿರುವ ಈ ಮನುಷ್ಯನಿಗೆ
ಇಂಥ ಜ್ಞಾನವು ಬಂದಿರುವದು ಹೇಗೆ
ಅಂದರು.
16 ಅದಕ್ಕೆ ಯೇಸು ಪ್ರತ್ಯುತ್ತರವಾಗಿ ಅವ
ರಿಗೆ--ನನ್ನ ಬೋಧನೆಯು ನನ್ನದಲ್ಲ; ಆದರೆ
ನನ್ನನ್ನು ಕಳುಹಿಸಿದಾತನದೇ.
17 ಯಾವನಾದರೂ ಆತನ ಚಿತ್ತದಂತೆ
ಮಾಡಿದರೆ ಈ ಬೋಧನೆಯು ದೇವರದೋ

ಅಥವಾ ನನ್ನಷ್ಟಕ್ಕೆ ನಾನೇ ಹೇಳುತ್ತೇನೋ ಎಂಬದು ಅವನಿಗೆ ತಿಳಿಯುವದು.
18 ತನ್ನ ವಿಷಯವಾಗಿ ತಾನೇ ಮಾತನಾಡುವವನು ತನ್ನ ಸ್ವಂತ ಮಹಿಮೆಯನ್ನು ಹುಡುಕುತ್ತಾನೆ; ಆದರೆ ತನ್ನನ್ನು ಕಳುಹಿಸಿದಾತನ ಮಹಿಮೆಯನ್ನು ಹುಡುಕುವಾತನೇ ಸತ್ಯವಂತನು; ಆತ ನಲ್ಲಿ ಅನೀತಿಯಿಲ್ಲ.
19 ಮೋಶೆಯು ನಿಮಗೆ ನ್ಯಾಯ ಪ್ರಮಾಣವನ್ನು ಕೊಟ್ಟಾಗ್ಯೂ ನಿಮ್ಮಲ್ಲಿ ಒಬ್ಬನೂ ಆ ನ್ಯಾಯಪ್ರಮಾಣವನ್ನು ಕೈಕೊಳ್ಳಲಿಲ್ಲವಲ್ಲಾ; ನೀವು ಯಾಕೆ ನನ್ನನ್ನು ಕೊಲ್ಲುವದಕ್ಕೆ ನೋಡುತ್ತೀರಿ ಎಂದು ಹೇಳಿದನು.

20 ಅದಕ್ಕೆ ಜನರು ಪ್ರತ್ಯುತ್ತರವಾಗಿ--ನಿನಗೆ
ದೆವ್ವ ಹಿಡಿದಿದೆ; ನಿನ್ನನ್ನು ಕೊಲ್ಲುವದಕ್ಕೆ
ನೋಡುವವರು ಯಾರು ಅಂದರು.
21 ಯೇಸು ಪ್ರತ್ಯುತ್ತರ ವಾಗಿ ಅವರಿಗೆ--
ನಾನು ಒಂದು ಕ್ರಿಯೆಯನ್ನು ಮಾಡಿ ದೆನು;
ಅದಕ್ಕೆ ನೀವೆಲ್ಲರು ಆಶ್ಚರ್ಯಪಡುತ್ತೀ
22 ಹಾಗಿದ್ದರೆ ಮೋಶೆಯು ನಿಮಗೆ
ಸುನ್ನತಿಯನ್ನು ಕೊಟ್ಟನು; (ಅದು
ಮೋಶೆಯದಲ್ಲ, ಆದರೆ ಅದು ಪಿತೃಗಳದೇ).
ನೀವು ಸಬ್ಬತ್ ದಿನದಲ್ಲಿ ಮನುಷ್ಯನಿಗೆ ಸುನ್ನತಿ
ಮಾಡುತ್ತೀರಿ.
23 ಒಬ್ಬ ಮನುಷ್ಯನು ಮೋಶೆಯ
ನ್ಯಾಯಪ್ರಮಾಣವನ್ನು ಮೀರದ ಹಾಗೆ ಸಬ್ಬತ್

ದಿನ ದಲ್ಲಿ ಸುನ್ನತಿಯನ್ನು ಮಾಡಿಸಿಕೊಂಡರೆ
ನಾನು ಒಬ್ಬ ಮನುಷ್ಯನನ್ನು ಸಬ್ಬತ್‌ದಿನದಲ್ಲಿ
ಸಂಪೂರ್ಣವಾಗಿ ಸ್ವಸ್ಥ ಮಾಡಿದ್ದಕ್ಕೆ ನನ್ನ ಮೇಲೆ
ನೀವು ಕೋಪಗೊಳ್ಳು ತ್ತೀರೋ?
24 ತೋರಿಕೆಗೆ ಅನುಸಾರವಾಗಿ ನ್ಯಾಯತೀರಿ
ಸಬೇಡಿರಿ. ಆದರೆ ನೀತಿಯ
ನ್ಯಾಯತೀರ್ಪನ್ನು ಮಾಡಿರಿ ಅಂದನು.
25 ಆಮೇಲೆ ಯೆರೂಸಲೇಮಿನವರಲ್ಲಿ
ಕೆಲವರು-- ಅವರು ಕೊಲ್ಲಬೇಕೆಂದು
ಹುಡುಕುತ್ತಿರುವದು ಈತನನ್ನೇ ಅಲ್ಲವೇ?
26 ಆದಾಗ್ಯೂ ಇಗೋ, ಈತನು ಧೈರ್ಯ
ವಾಗಿ ಮಾತನಾಡುತ್ತಾನೆ; ಆದರೆ ಅವರು
ಈತನಿಗೆ ಏನೂ ಹೇಳುವದಿಲ್ಲ. ಈತನೇ

ನಿಜವಾದ ಆ ಕ್ರಿಸ್ತನೆಂದು ಅಧಿಕಾರಿಗಳು
ತಿಳುಕೊಂಡಿದ್ದಾರೋ?
27 ಹೇಗೂ ಈ ಮನುಷ್ಯನು
ಎಲ್ಲಿಯುವನೆಂದು ನಾವು ಬಲ್ಲೆವು; ಆದರೆ
ಕ್ರಿಸ್ತನು ಬರುವಾಗ ಆತನು ಎಲ್ಲಿಯುವ
ನೆಂದು ಯಾರಿಗೂ ತಿಳಿಯದು ಅಂದರು.
28 ತರು ವಾಯ ಯೇಸು
ದೇವಾಲಯದಲ್ಲಿ ಬೋಧಿಸುತ್ತಿ ದ್ದಾಗ--ನೀವು
ನನ್ನನ್ನು ಬಲ್ಲಿರಿ ಮತ್ತು ನಾನು
ಎಲ್ಲಿಯುವನೆಂದೂ ನೀವು ಬಲ್ಲಿರಿ; ಆದರೆ
ನನ್ನಷ್ಟಕ್ಕೆ ನಾನೇ ಬರಲಿಲ್ಲ; ನನ್ನನ್ನು
ಕಳುಹಿಸಿದಾತನು ಸತ್ಯ ವಂತನೇ; ಆತನನ್ನು
ನೀವು ಅರಿತವರಲ್ಲ.

29 ಆದರೆ ನಾನು ಆತನನ್ನು ಬಲ್ಲೆನು;
ಯಾಕಂದರೆ ನಾನು ಆತನ ಕಡೆಯಿಂದ
ಬಂದವನು; ಆತನು ನನ್ನನ್ನು
ಕಳುಹಿಸಿಕೊಟ್ಟಿದ್ದಾನೆ ಎಂದು ಕೂಗಿ
ಹೇಳಿದನು.
30 ಆಗ ಅವರು ಆತನನ್ನು ಹಿಡಿಯಲು
ಹವಣಿಸಿದರು; ಆದರೆ ಆತನ ಗಳಿಗೆ ಇನ್ನೂ
ಬಾರದೆ ಇದ್ದದರಿಂದ ಆತನ ಮೇಲೆ ಯಾರೂ
ಕೈ ಹಾಕಲಿಲ್ಲ.
31 ಜನರಲ್ಲಿ ಅನೇಕರು ಆತನನ್ನು ನಂಬಿ--
ಕ್ರಿಸ್ತನು ಬಂದಾಗ ಈ ಮನುಷ್ಯನು
ಮಾಡಿದ್ದಕ್ಕಿಂತ ಹೆಚ್ಚು ಅದ್ಭುತಕಾರ್ಯಗಳನ್ನು
ಮಾಡುವನೋ ಅಂದರು.

32 ಆತನ ವಿಷಯವಾಗಿ ಜನರು
ಗುಣುಗುಟ್ಟಿದ ರೆಂದು ಫರಿಸಾಯರು
ಕೇಳಿದರು; ಫರಿಸಾಯರೂ
ಪ್ರಧಾನಯಾಜಕರೂ ಆತನನ್ನು
ಹಿಡಿಯುವದಕ್ಕೆ ಅಧಿ ಕಾರಿಗಳನ್ನು
ಕಳುಹಿಸಿದರು.
33 ತರುವಾಯ ಯೇಸು ಅವರಿಗೆ--ಇನ್ನು
ಸ್ವಲ್ಪಕಾಲ ನಾನು ನಿಮ್ಮೊಂದಿಗಿದ್ದು ಆಮೇಲೆ
ನನ್ನನ್ನು ಕಳುಹಿಸಿದಾತನ ಬಳಿಗೆ ಹೋಗು
ತ್ತೇನೆ.
34 ನೀವು ನನ್ನನ್ನು ಹುಡುಕುವಿರಿ, ಆದರೆ
ನನ್ನನ್ನು ಕಾಣುವದಿಲ್ಲ; ನಾನಿರುವಲ್ಲಿಗೆ ನೀವು
ಬರಲಾರಿರಿ ಅಂದನು.

35 ಆಗ ಯೆಹೂದ್ಯರು--ನಾವು ಅವನನ್ನು
ಕಾಣದ ಹಾಗೆ ಅವನು ಎಲ್ಲಿಗೆ
ಹೋಗುವನು? ಅನ್ಯಜನರ ಮಧ್ಯದಲ್ಲಿ
ಚದರಿಹೋದವರ ಬಳಿಗೆ ಹೋಗಿ
ಅನ್ಯಜನರಿಗೆ ಬೋಧಿಸುವನೋ?
36 ನೀವು ನನ್ನನ್ನು ಹುಡುಕುವಿರಿ, ಆದರೆ
ನನ್ನನ್ನು ಕಾಣಲಾರಿರಿ; ನಾನಿರುವಲ್ಲಿಗೆ ನೀವು
ಬರಲಾರಿರಿ ಎಂದು ಇವನು ಹೇಳಿರುವದು
ಎಂಥಾ ಮಾತಾಗಿರಬಹುದು ಎಂದು ತಮ್ಮಲ್ಲಿ
ಅಂದುಕೊಂಡರು.
37 ಹಬ್ಬದ ಆ ಮಹಾದಿವಸವಾದ ಕಡೇ
ದಿನದಲ್ಲಿ ಯೇಸು ನಿಂತುಕೊಂಡು--
ಯಾವನಿಗಾದರೂ ನೀರಡಿಕೆ ಯಾಗಿದ್ದರೆ

ಅವನು ನನ್ನ ಬಳಿಗೆ ಬಂದು ಕುಡಿಯಲಿ.
38 ನನ್ನ ಮೇಲೆ ನಂಬಿಕೆ ಇಡುವವನಿಗೆ
ಬರಹವು ಹೇಳಿದ ಪ್ರಕಾರ ಆತನ
ಹೊಟ್ಟೆಯೊಳಗಿಂದ ಜೀವ ಕರವಾದ ನೀರಿನ
ಹೊಳೆಗಳು ಹರಿಯುವವು ಎಂದು ಕೂಗಿ
ಹೇಳಿದನು.
39 (ಆದರೆ ಆತನು ತನ್ನಲ್ಲಿ
ವಿಶ್ವಾಸವಿಡುವವರು ಹೊಂದಲಿರುವ
ಆತ್ಮನನ್ನು ಕುರಿತು ಇದನ್ನು ಹೇಳಿದನು;
ಯಾಕಂದರೆ ಯೇಸು ಇನ್ನೂ
ಮಹಿಮೆಯನ್ನು ಹೊಂದಿರಲಿಲ್ಲವಾದ್ದರಿಂದ
ಪವಿತ್ರಾ ತ್ಮನು ಇನ್ನೂ ಕೊಡಲ್ಪಟ್ಟಿರಲಿಲ್ಲ.)
40 ಆದದರಿಂದ ಜನರಲ್ಲಿ ಅನೇಕರು ಈ

ಮಾತನ್ನು ಕೇಳಿದಾಗ--ಈತನು ನಿಜವಾಗಿಯೂ ಆ ಪ್ರವಾದಿ ಯಾಗಿದ್ದಾನೆ ಅಂದರು.
41 ಬೇರೆಯವರು--ಈತನೇ ಆ ಕ್ರಿಸ್ತನು ಅಂದರು. ಆದರೆ ಕೆಲವರು--ಕ್ರಿಸ್ತನು ಗಲಿಲಾಯದಿಂದ ಬರುವನೋ?
42 ಆದರೆ ಕ್ರಿಸ್ತನು ದಾವೀದನ ಸಂತಾನದಿಂದಲೂ ದಾವೀದನಿದ್ದ ಬೇತ್ಲೆಹೇಮೆಂಬ ಊರಿನಿಂದಲೂ ಬರುವನೆಂದು ಬರಹವು ಹೇಳುತ್ತದಲ್ಲವೇ? ಅಂದರು.
43 ಹೀಗೆ ಆತನ ನಿಮಿತ್ತ ವಾಗಿ ಜನರಲ್ಲಿ ಭೇದ ಉಂಟಾಯಿತು;

44 ಅವರಲ್ಲಿ ಕೆಲವರು ಆತನನ್ನು
ಹಿಡಿಯಬೇಕೆಂದಿದ್ದರು; ಆದರೆ ಯಾರೂ
ಆತನ ಮೇಲೆ ಕೈ ಹಾಕಲಿಲ್ಲ.
45 ಬಳಿಕ ಪ್ರಧಾನಯಾಜಕರ ಮತ್ತು
ಫರಿಸಾಯರ ಬಳಿಗೆ ಅಧಿಕಾರಿಗಳು ಬಂದಾಗ
ಅವರಿಗೆ--ನೀವು ಯಾಕೆ ಆತನನ್ನು
ಕರತರಲಿಲ್ಲ ಎಂದು ಕೇಳಿದರು.
46 ಅದಕ್ಕೆ ಅಧಿಕಾರಿಗಳು ಪ್ರತ್ಯುತ್ತರವಾಗಿ--ಈ
ಮನುಷ್ಯನಂತೆ ಯಾವನೂ ಎಂದೂ
ಮಾತನಾಡಲಿಲ್ಲ ಅಂದರು.
47 ಆಗ ಫರಿಸಾಯರೂ ಅವರಿಗೆ--ನೀವು
ಸಹ ಮೋಸ ಹೋದಿರೋ?
48 ಅಧಿಕಾರಿಗಳಲ್ಲಿಯೂ

ಫರಿಸಾಯರಲ್ಲಿಯೂ ಯಾರಾದರೂ ಅವನ
ಮೇಲೆ ವಿಶ್ವಾಸವಿಟ್ಟಿದ್ದಾರೋ?
49 ಆದರೆ ನ್ಯಾಯಪ್ರಮಾಣ ವನ್ನರಿಯದ ಈ
ಜನರು ಶಾಪಗ್ರಸ್ತರೇ ಎಂದು ಹೇಳಿದರು.
50 ನಿಕೊದೇಮನು ಅವರಿಗೆ--(ರಾತ್ರಿಯಲ್ಲಿ
ಯೇಸುವಿನ ಬಳಿಗೆ ಬಂದಿದ್ದ ಇವನು
ಅವರಲ್ಲಿ ಒಬ್ಬ ನಾಗಿದ್ದನು.)
51 ಒಬ್ಬನನ್ನು ವಿಚಾರಿಸಿ ಅವನು ಮಾಡು
ವದೇನೆಂದು ತಿಳಿದುಕೊಳ್ಳುವದಕ್ಕಿಂತ ಮುಂಚೆ
ಅವ ನನ್ನು ನಮ್ಮ ನ್ಯಾಯಪ್ರಮಾಣವು
ತೀರ್ಪು ಮಾಡುವ ದುಂಟೇ ಅಂದನು.
52 ಅವರು ಪ್ರತ್ಯುತ್ತರವಾಗಿ ಅವನಿಗೆ--ನೀನು
ಸಹ ಗಲಿಲಾಯದವನೋ? ಗಲಿ

ಲಾಯದಲ್ಲಿ ಪ್ರವಾದಿಯು ಏಳುವದೇ ಇಲ್ಲ, ಪರಿ ಶೋಧಿಸಿ ನೋಡು ಅಂದರು.
53 ಪ್ರತಿಯೊಬ್ಬನು ತನ್ನ ಸ್ವಂತ ಮನೆಗೆ ಹೋದನು.

## ಅಧ್ಯಾಯ 8

1 ಯೇಸು ಎಣ್ಣೇಮರಗಳ ಗುಡ್ಡಕ್ಕೆ ಹೋದನು.
2 ಬೆಳಿಗ್ಗೆ ಆತನು ತಿರಿಗಿ ದೇವಾಲಯಕ್ಕೆ ಬಂದಾಗ ಎಲ್ಲಾ ಜನರು ಆತನ ಬಳಿಗೆ ಬಂದರು; ಆತನು ಕೂತುಕೊಂಡು ಅವರಿಗೆ ಬೋಧಿಸಿ ದನು.

3 ಆಗ ವ್ಯಭಿಚಾರದಲ್ಲಿ ಸಿಕ್ಕಿದ ಒಬ್ಬ ಹೆಂಗಸನ್ನು
ಶಾಸ್ತ್ರಿಗಳು ಮತ್ತು ಫರಿಸಾಯರು ಆತನ
ಬಳಿಗೆ ತಂದು ಆಕೆಯನ್ನು ನಡುವೆ ನಿಲ್ಲಿಸಿ
4 ಆತನಿಗೆ -- ಬೋಧಕನೇ, ಈ ಹೆಂಗಸು
ವ್ಯಭಿಚಾರ ಮಾಡುವಾಗಲೇ ಹಿಡಿಯ
ಲ್ಪಟ್ಟಳು.
5 ಇಂಥವರು ಕಲ್ಲೆಸೆಯಲ್ಪಡಬೇಕೆಂದು
ಮೋಶೆಯು ನ್ಯಾಯಪ್ರಮಾಣದಲ್ಲಿ ನಮಗೆ
ಅಪ್ಪಣೆ ಕೊಟ್ಟಿದ್ದಾನೆ; ಆದರೆ ನೀನು ಏನು
ಹೇಳುತ್ತೀ ಎಂದು ಕೇಳಿದರು.
6 ಅವರು ಆತನನ್ನು ಶೋಧಿಸುವವರಾಗಿ
ಆತನ ಮೇಲೆ ತಪ್ಪು ಹೊರಿಸಬೇಕೆಂದು ಹೀಗೆ
ಹೇಳಿ ದರು. ಆದರೆ ಯೇಸು ಅವರ

ಮಾತುಗಳನ್ನು ಕೇಳದವ ನಂತೆ ಬೊಗ್ಗಿಕೊಂಡು ತನ್ನ ಬೆರಳಿನಿಂದ ನೆಲದ ಮೇಲೆ ಬರೆದನು.
7 ಆದರೆ ಅವರು ಬಿಡದೆ ಆತನನ್ನು ಕೇಳುತ್ತಿರಲು ಆತನು ಮೇಲಕ್ಕೆ ನೋಡಿ--ನಿಮ್ಮೊಳಗೆ ಯಾವನು ಪಾಪವಿಲ್ಲದವನಾಗಿದ್ದಾನೋ ಅವನೇ ಮೊದಲು ಆಕೆಯ ಮೇಲೆ ಕಲ್ಲನ್ನು ಹಾಕಲಿ ಎಂದು ಅವರಿಗೆ ಹೇಳಿದನು.
8 ತಿರಿಗಿ ಆತನು ಬೊಗ್ಗಿಕೊಂಡು ನೆಲದ ಮೇಲೆ ಬರೆದನು.
9 ಅದನ್ನು ಕೇಳಿದವರು ತಮ್ಮ ಸ್ವಂತ ಮನಸಾಕ್ಷಿಯಿಂದ ಮನವರಿಕೆಯಾಗಿ

ಹಿರಿಯುವನು ಮೊದಲುಗೊಂಡು ಕಡೆಯುವನವರೆಗೂ ಒಬ್ಬೊಬ್ಬರಾಗಿ ಹೊರಗೆಹೋದರು; ಆಗ ಯೇಸು ಒಬ್ಬನೇ ಉಳಿದನು; ಆ ಹೆಂಗಸು ನಡುವೆ ನಿಂತು ಕೊಂಡಿದ್ದಳು.
10 ಯೇಸು ಮೇಲಕ್ಕೆ ನೋಡಿ ಆ ಹೆಂಗಸಿನ ಹೊರತು ಯಾರನ್ನೂ ಕಾಣದೆ ಆಕೆಗೆ-- ಸ್ತ್ರೀಯೇ, ನಿನ್ನ ಮೇಲೆ ದೂರು ಹೊರಿಸಿದವರು ಎಲ್ಲಿ ದ್ದಾರೆ? ನಿನಗೆ ಯಾರೂ ಶಿಕ್ಷೆ ವಿಧಿಸಲಿಲ್ಲವೋ? ಅಂದನು.
11 ಅದಕ್ಕೆ ಆಕೆಯು-- ಕರ್ತನೇ, ಯಾರೂ ವಿಧಿಸಲಿಲ್ಲ ಅಂದಳು. ಯೇಸು ಆಕೆಗೆ-- ನಾನೂ ನಿನಗೆ ಶಿಕ್ಷೆ ವಿಧಿಸುವದಿಲ್ಲ; ಹೋಗು,

ಇನ್ನು ಮೇಲೆ ಪಾಪಮಾಡಬೇಡ ಅಂದನು.
12 ತರುವಾಯ ಯೇಸು ತಿರಿಗಿ ಮಾತನಾಡಿ
ಅವರಿಗೆ--ನಾನೇ ಲೋಕಕ್ಕೆ ಬೆಳಕಾಗಿದ್ದೇನೆ;
ನನ್ನನ್ನು ಹಿಂಬಾಲಿಸುವವನು ಕತ್ತಲೆಯಲ್ಲಿ
ನಡೆಯುವದಿಲ್ಲ; ಆದರೆ ಜೀವದ ಬೆಳಕನ್ನು
ಹೊಂದುವನು ಎಂದು ಹೇಳಿದನು.
13 ಆದಕಾರಣ ಫರಿಸಾಯರು ಆತ ನಿಗೆ--
ನಿನ್ನ ವಿಷಯವಾಗಿ ನೀನೇ ಸಾಕ್ಷಿಕೊಡುತ್ತೀ;
ನಿನ್ನ ಸಾಕ್ಷಿಯು ನಿಜವಲ್ಲ ಎಂದು ಹೇಳಿದರು.
14 ಯೇಸು ಪ್ರತ್ಯುತ್ತರವಾಗಿ ಅವರಿಗೆ--ನನ್ನ
ವಿಷಯ ವಾಗಿ ನಾನು ಸಾಕ್ಷಿಕೊಟ್ಟಾಗ್ಯೂ ನನ್ನ
ಸಾಕ್ಷಿ ನಿಜವೇ; ಯಾಕಂದರೆ ನಾನು ಎಲ್ಲಿಂದ
ಬಂದೆನೋ ಮತ್ತು ಎಲ್ಲಿಗೆ ಹೋಗುತ್ತೇನೋ

ನಾನು ಬಲ್ಲೆನು; ಆದರೆ ನಾನು ಎಲ್ಲಿಂದ
ಬಂದೆನೋ ಇಲ್ಲವೆ ಎಲ್ಲಿಗೆ ಹೋಗುತ್ತೇನೋ
ನೀವು ಹೇಳಲಾರಿರಿ.
15 ನೀವು ಶಾರೀರಿಕ ರೀತಿಯಲ್ಲಿ ತೀರ್ಪು
ಮಾಡುತ್ತೀರಿ; ಆದರೆ ಯಾವ ಮನುಷ್ಯನಿಗೂ
ನಾನು ತೀರ್ಪುಮಾಡುವದಿಲ್ಲ.
16 ನಾನು ತೀರ್ಪು ಮಾಡಿದರೂ ನನ್ನ
ತೀರ್ಪು ನಿಜ ವಾದದ್ದೇ; ಯಾಕಂದರೆ ನಾನು
ಒಂಟಿಗನಲ್ಲ, ಆದರೆ ನಾನೂ ನನ್ನನ್ನು
ಕಳುಹಿಸಿದ ತಂದೆಯೂ ಇದ್ದೇವೆ.
17 ಇಬ್ಬರ ಸಾಕ್ಷಿಯು ನಿಜವೆಂದು ನಿಮ್ಮ
ನ್ಯಾಯ ಪ್ರಮಾಣದಲ್ಲಿಯೂ ಬರೆದದೆ.
18 ನನ್ನ ವಿಷಯವಾಗಿ ನಾನೇ ಸಾಕ್ಷಿ

ಕೊಡುತ್ತೇನೆ ಮತ್ತು ನನ್ನನ್ನು ಕಳುಹಿಸಿದ ತಂದೆಯೂ ನನ್ನ ವಿಷಯವಾಗಿ ಸಾಕ್ಷಿಕೊಡುತ್ತಾನೆ ಅಂದನು.
19 ತರುವಾಯ ಅವರು ಆತನಿಗೆ--ನಿನ್ನ ತಂದೆ ಎಲ್ಲಿ ಅಂದರು. ಅದಕ್ಕೆ ಯೇಸು ಪ್ರತ್ಯುತ್ತರ ವಾಗಿ--ನನ್ನನ್ನಾಗಲಿ ನನ್ನ ತಂದೆಯನ್ನಾಗಲಿ ನೀವು ಅರಿತಿಲ್ಲ; ನೀವು ನನ್ನನ್ನು ಅರಿತುಕೊಂಡಿದ್ದರೆ ನನ್ನ ತಂದೆಯನ್ನು ಸಹ ಅರಿತುಕೊಳ್ಳುತ್ತಿದ್ದಿರಿ ಅಂದನು.
20 ಯೇಸು ದೇವಾಲಯದಲ್ಲಿ ಬೋಧಿಸುತ್ತಿದ್ದಾಗ ಬೊಕ್ಕಸದ ಬಳಿಯಲ್ಲಿ ಈ ಮಾತುಗಳನ್ನು ಆಡಿದನು; ಆದರೆ ಆತನ ಗಳಿಗೆ ಇನ್ನೂ ಬಾರದೆ ಇದ್ದದರಿಂದ ಯಾರೂ

ಆತನ ಮೇಲೆ ಕೈಹಾಕಲಿಲ್ಲ.
21 ಯೇಸು ತಿರಿಗಿ ಅವರಿಗೆ--ನಾನು ಹೋಗುತ್ತೇನೆ; ನೀವು ನನ್ನನ್ನು ಹುಡುಕುವಿರಿ ಮತ್ತು ನಿಮ್ಮ ಪಾಪ ಗಳಲ್ಲಿ ಸಾಯುವಿರಿ; ನಾನು ಹೋಗುವಲ್ಲಿಗೆ ನೀವು ಬರಲಾರಿರಿ ಅಂದನು.
22 ಅದಕ್ಕೆ ಯೆಹೂದ್ಯರು--ಇವನು ತನ್ನನ್ನು ತಾನೇ ಕೊಂದುಕೊಳ್ಳಬೇಕೆಂದಿ ದ್ದಾನೋ? ಯಾಕಂದರೆ--ನಾನು ಹೋಗುವಲ್ಲಿಗೆ ನೀವು ಬರಲಾರಿರಿ ಎಂದು ಹೇಳುತ್ತಾನಲ್ಲಾ ಅಂದರು.
23 ಆತನು ಅವರಿಗೆ--ನೀವು ಕೆಳಗಿನವರು, ನಾನು ಮೇಲಿನವನು; ನೀವು ಈ

ಲೋಕದವರು, ನಾನು ಈ ಲೋಕದವನಲ್ಲ.
24 ಆದದರಿಂದ ನೀವು ನಿಮ್ಮ
ಪಾಪಗಳಲ್ಲಿಯೇ ಸಾಯುವಿರಿ ಎಂದು
ನಾನು ನಿಮಗೆ ಹೇಳಿದೆನು. ಯಾಕಂದರೆ
ನನ್ನನ್ನು ಆತನೆಂದು ನೀವು ನಂಬದೆ ಹೋದರೆ
ನೀವು ನಿಮ್ಮ ಪಾಪಗಳಲ್ಲಿಯೇ ಸಾಯುವಿರಿ
ಎಂದು ಹೇಳಿದನು.
25 ತರುವಾಯ ಅವರು ಆತನಿಗೆ--ನೀನು
ಯಾರಾಗಿದ್ದೀ ಅಂದರು. ಅದಕ್ಕೆ ಯೇಸು
ಅವರಿಗೆ--ಮೊದಲಿನಿಂದಲೂ ನಾನು ನಿಮಗೆ
ಹೇಳಿದಂತವನೇ.
26 ನಿಮ್ಮ ವಿಷಯವಾಗಿ ಹೇಳುವದಕ್ಕೂ
ತೀರ್ಪುಮಾಡುವದಕ್ಕೂ ನನಗೆ ಅನೇಕ

ವಿಷಯುಗಳಿವೆ. ಆದರೆ ನನ್ನನ್ನು ಕಳುಹಿಸಿದಾತನು ಸತ್ಯವಂತನು. ನಾನು ಆತನಿಂದ ಕೇಳಿದವುಗಳನ್ನೇ ಲೋಕಕ್ಕೆ ಹೇಳುತ್ತೇನೆ ಅಂದನು.
27 ಆತನು ತಂದೆಯ ವಿಷಯವಾಗಿ ತಮ್ಮ ಸಂಗಡ ಮಾತನಾಡಿದನೆಂದು ಅವರು ಗ್ರಹಿಸಲಿಲ್ಲ.
28 ಆಮೇಲೆ ಯೇಸು ಅವ ರಿಗೆ--ಮನುಷ್ಯಕುಮಾರನನ್ನು ನೀವು ಮೇಲಕ್ಕೆತ್ತಿದಾಗ ನಾನೇ ಆತನೆಂದೂ ನನ್ನಷ್ಟಕ್ಕೆ ನಾನೇ ಏನೂ ಮಾಡದೆ ನನ್ನ ತಂದೆಯು ನನಗೆ ತಿಳಿಸಿದ ಹಾಗೆ ಈ ಸಂಗತಿ ಗಳನ್ನು ಹೇಳುತ್ತೇನೆಂದೂ ನೀವು ತಿಳಿದುಕೊಳ್ಳುವಿರಿ.

29 ಇದಲ್ಲದೆ ನನ್ನನ್ನು ಕಳುಹಿಸಿದಾತನು ನನ್ನ
ಸಂಗಡ ಇದ್ದಾನೆ; ತಂದೆಯು ನನ್ನನ್ನು
ಒಂಟಿಯಾಗಿ ಬಿಡಲಿಲ್ಲ;ಯಾಕಂದರೆ ಆತನು
ಮೆಚ್ಚುವವುಗಳನ್ನೇ ನಾನು ಯಾವಾಗಲೂ
ಮಾಡುತ್ತೇನೆ ಅಂದನು.
30 ಆತನು ಈ ಮಾತುಗಳನ್ನು
ಹೇಳುತ್ತಿದ್ದಾಗಲೇ ಅನೇಕರು ಆತನಲ್ಲಿ
ನಂಬಿಕೆಯಿಟ್ಟರು.
31 ಆತನ ಮೇಲೆ ನಂಬಿಕೆಯಿಟ್ಟ ಆ
ಯೆಹೂದ್ಯರಿಗೆ ಯೇಸು ನೀವು ನನ್ನ
ವಾಕ್ಯದಲ್ಲಿ ನೆಲೆಗೊಂಡಿದ್ದರೆ ನಿಜವಾ ಗಿಯೂ
ನೀವು ನನ್ನ ಶಿಷ್ಯರಾಗುವಿರಿ.
32 ಇದಲ್ಲದೆ ನೀವು ಸತ್ಯವನ್ನು

ತಿಳಿದುಕೊಳ್ಳುವಿರಿ; ಆ ಸತ್ಯವು ನಿಮ್ಮನ್ನು ಬಿಡುಗಡೆ ಮಾಡುವದು ಎಂದು ಹೇಳಿದನು.
33 ಅದಕ್ಕೆ ಅವರು ಪ್ರತ್ಯುತ್ತರವಾಗಿ ಆತನಿಗೆ--ನಾವು ಅಬ್ರಹಾಮನ ಸಂತತಿಯವರಾಗಿರಲಾಗಿ ಯಾವ ಮನುಷ್ಯನಿಗೂ ಎಂದಿಗೂ ಗುಲಾಮರಾಗಿರಲಿಲ್ಲ; ಹಾಗಾದರೆ--ನಿಮಗೆ ಬಿಡುಗಡೆಯಾಗುವದೆಂದು ನೀನು ಹೇಗೆ ಹೇಳುತ್ತೀ ಅಂದರು.
34 ಆಗ ಯೇಸು ಪ್ರತ್ಯುತ್ತರವಾಗಿ ಅವರಿಗೆ--ನಾನು ನಿಮಗೆ ನಿಜನಿಜ ವಾಗಿ ಹೇಳುತ್ತೇನೆ--ಪಾಪ ಮಾಡುವವನು ಪಾಪಕ್ಕೆ ಗುಲಾಮನಾಗಿದ್ದಾನೆ.

35 ಗುಲಾಮನು ಮನೆಯಲ್ಲಿ
ಯಾವಾಗಲೂ ಇರುವದಿಲ್ಲ; ಆದರೆ ಮಗನು
ಯಾವಾಗಲೂ ಇರುತ್ತಾನೆ.
36 ಆದದರಿಂದ ಮಗನು ನಿಮ್ಮನ್ನು
ಬಿಡುಗಡೆ ಮಾಡಿದರೆ ನಿಜವಾಗಿಯೂ ನೀವು
ಬಿಡುಗಡೆಯಾಗುವಿರಿ.
37 ನೀವು ಅಬ್ರಹಾಮನ ಸಂತತಿಯವರೆಂದು
ನಾನು ಬಲ್ಲೆನು; ಆದರೆ ನಿಮ್ಮಲ್ಲಿ ನನ್ನ ವಾಕ್ಯಕ್ಕೆ
ಸ್ಥಳವಿಲ್ಲದ ಕಾರಣ ನೀವು ನನ್ನನ್ನು
ಕೊಲ್ಲುವದಕ್ಕೆ ನೋಡುತ್ತೀರಿ.
38 ನನ್ನ ತಂದೆಯ ಬಳಿ ಯಲ್ಲಿ ನಾನು
ನೋಡಿದ್ದನ್ನೇ ಮಾತನಾಡುತ್ತೇನೆ; ನೀವು
ನಿಮ್ಮ ತಂದೆಯ ಬಳಿಯಲ್ಲಿ ನೋಡಿದ್ದನ್ನು

ಮಾಡುತ್ತೀರಿ ಅಂದನು.
39 ಅವರು ಪ್ರತ್ಯುತ್ತರವಾಗಿ ಆತನಿಗೆ--
ಅಬ್ರಹಾಮನು ನಮ್ಮ ತಂದೆ ಅಂದರು; ಅದಕ್ಕೆ
ಯೇಸು ಅವರಿಗೆ--ನೀವು ಅಬ್ರಹಾಮನ
ಮಕ್ಕಳಾಗಿದ್ದರೆ ಅಬ್ರಹಾಮನ ಕ್ರಿಯೆಗಳನ್ನು
ಮಾಡು ತ್ತಿದ್ದಿರಿ.
40 ಆದರೆ ದೇವರಿಂದ ಕೇಳಿದ ಸತ್ಯವನ್ನು
ನಿಮಗೆ ಹೇಳಿದ ನನ್ನನ್ನು ಈಗ ಕೊಲ್ಲುವದಕ್ಕೆ
ನೋಡುತ್ತೀರಿ; ಇದನ್ನು ಅಬ್ರಹಾಮನು
ಮಾಡಲಿಲ್ಲ.
41 ನೀವು ನಿಮ್ಮ ತಂದೆಯ ಕ್ರಿಯೆಗಳನ್ನು
ಮಾಡುತ್ತೀರಿ ಅಂದನು. ಅದಕ್ಕವರು
ಆತನಿಗೆ--ನಾವು ವ್ಯಭಿಚಾರದಿಂದ ಹುಟ್ಟಿ

ದವರಲ್ಲ; ನಮಗೆ ಒಬ್ಬನೇ ತಂದೆ, ಆತನು ದೇವರೇ ಅಂದರು.

42 ಯೇಸು ಅವರಿಗೆ--ದೇವರು ನಿಮ್ಮ ತಂದೆಯಾಗಿದ್ದರೆ ನೀವು ನನ್ನನ್ನು ಪ್ರೀತಿಸುತ್ತಿದ್ದಿರಿ; ಯಾಕಂದರೆ ನಾನು ದೇವರಿಂದ ಹೊರಟುಬಂದಿದ್ದೇನೆ. ನನ್ನಷ್ಟಕ್ಕೆ ನಾನೇ ಬರಲಿಲ್ಲ; ಆದರೆ ಆತನೇ ನನ್ನನ್ನು ಕಳುಹಿಸಿದನು.

43 ನೀವು ನನ್ನ ಮಾತನ್ನು ಯಾಕೆ ಗ್ರಹಿ ಸದೆ ಇದ್ದೀರಿ? ನೀವು ನನ್ನ ವಾಕ್ಯವನ್ನು ಕೇಳದೆ ಇರುವದರಿಂದಲೇ.

44 ನೀವು ನಿಮ್ಮ ತಂದೆಯಾದ ಸೈತಾನನಿಗೆ ಸಂಬಂಧಪಟ್ಟವರಾಗಿದ್ದೀರಿ. ನಿಮ್ಮ ತಂದೆಯ

ದುರಾಶೆಗಳನ್ನೇ ನೀವು ಮಾಡುವದಕ್ಕೆ ಇಚ್ಛೈಸುತ್ತೀರಿ; ಅವನು ಆದಿಯಿಂದಲೂ ಕೊಲೆಗಾರನಾಗಿದ್ದು ಸತ್ಯ ದಲ್ಲಿ ನಿಲ್ಲಲಿಲ್ಲ. ಯಾಕಂದರೆ ಅವನಲ್ಲಿ ಸತ್ಯವೇ ಇಲ್ಲ; ಅವನು ಸುಳ್ಳಾಡುವಾಗ ತನ್ನ ಸ್ವಂತವಾದವುಗಳಿಂದ ಮಾ

45 ನಾನು ನಿಮಗೆ ಸತ್ಯವನ್ನು ಹೇಳುವವನಾದದರಿಂದ ನೀವು ನನ್ನನ್ನು ನಂಬುವದಿಲ್ಲ.

46 ನನ್ನಲ್ಲಿ ಪಾಪವಿದೆ ಎಂದು ನಿಮ್ಮಲ್ಲಿ ಯಾರು ಸ್ಥಾಪಿಸುವಿರಿ? ಮತ್ತು ನಾನು ಸತ್ಯವನ್ನು ಹೇಳಿದರೆ ನೀವು ನನ್ನನ್ನು ಯಾಕೆ ನಂಬುವದಿಲ್ಲ?

47 ದೇವರಿಗೆ ಸಂಬಂಧಪಟ್ಟವನು ದೇವರ
ವಾಕ್ಯಗಳನ್ನು ಕೇಳುತ್ತಾನೆ. ಆದರೆ ನೀವು
ದೇವರಿಗೆ ಸಂಬಂಧಪಟ್ಟವರಲ್ಲದ ಕಾರಣ
ಅವುಗಳನ್ನು ಕೇಳುವದಿಲ್ಲ ಎಂದು ಹೇಳಿದನು.
48 ಆಗ ಯೆಹೂದ್ಯರು ಪ್ರತ್ಯುತ್ತರವಾಗಿ
ಆತನಿಗೆ--ನೀನು ಸಮಾರ್ಯನು ಮತ್ತು
ನಿನಗೆ ದೆವ್ವ ಹಿಡಿದದೆ ಎಂದು ನಾವು
ಹೇಳುವದು ಸರಿಯಲ್ಲವೋ ಎಂದು
ಹೇಳಿದರು.
49 ಅದಕ್ಕೆ ಯೇಸು ಪ್ರತ್ಯುತ್ತರವಾಗಿ-- ನನಗೆ
ದೆವ್ವ ಹಿಡಿದಿಲ್ಲ; ಆದರೆ ನನ್ನ ತಂದೆಯನ್ನು
ಸನ್ಮಾನಿಸುತ್ತೇನೆ, ನೀವು ನನ್ನನ್ನು ಅವಮಾನ
ಪಡಿಸುತ್ತೀರಿ.

50 ಇದಲ್ಲದೆ ನಾನು ನನ್ನ ಸ್ವಂತ
ಮಹಿಮೆಯನ್ನು ಹುಡುಕುವದಿಲ್ಲ; ಆದರೆ
ಹುಡುಕು ವವನೂ ನ್ಯಾಯತೀರಿಸುವವನೂ
ಒಬ್ಬನಿದ್ದಾನೆ.
51 ನಾನು ನಿಮಗೆ ನಿಜನಿಜವಾಗಿ
ಹೇಳುತ್ತೇನೆ--ಒಬ್ಬನು ನನ್ನ ಮಾತನ್ನು
ಕೈಕೊಂಡರೆ ಅವನು ಎಂದಿಗೂ ಮರಣವನ್ನು
ಕಾಣುವದಿಲ್ಲ ಅಂದನು.
52 ಆಗ ಯೆಹೂದ್ಯರು ಆತನಿಗೆ--ನಿನಗೆ ದೆವ್ವ
ಹಿಡಿದದೆ ಎಂದು ನಮಗೆ ಈಗ ತಿಳಿಯಿತು;
ಅಬ್ರಹಾಮನು ಮತ್ತು ಪ್ರವಾದಿಗಳು ಸತ್ತರು;
ಆದರೆ--ಯಾವನಾದರೂ ನನ್ನ ಮಾತನ್ನು
ಕೈಕೊಂಡರೆ ಅವನು ಎಂದಿಗೂ ಮರಣವನ್ನು

ಅನುಭವಿಸುವದಿಲ್ಲವೆಂದು ನೀನು ಹೇಳುತ್ತೀಯಲ್ಲಾ;
53 ಸತ್ತುಹೋದ ನಮ್ಮ ತಂದೆ ಯಾದ ಅಬ್ರಹಾಮನಿಗಿಂತಲೂ ನೀನು ದೊಡ್ಡ ವನೋ? ಪ್ರವಾದಿಗಳೂ ಸತ್ತುಹೋದರು. ನಿನ್ನನ್ನು ಯಾರೆಂದು ನೀನು ಮಾಡಿಕೊಳ್ಳುತ್ತೀ ಎಂದು ಕೇಳಲು
54 ಯೇಸು--ನನ್ನನ್ನು ನಾನೇ ಸನ್ಮಾನಿಸಿಕೊಂಡರೆ ನನ್ನ ಸನ್ಮಾನವು ಏನೂ ಅಲ್ಲ; ನೀವು ಯಾವಾತನನ್ನು ನಿಮ್ಮ ದೇವರೆಂದು ಹೇಳುತ್ತೀರೋ ಆ ನನ್ನ ತಂದೆಯೇ ನನ್ನನ್ನು ಸನ್ಮಾನಿಸುತ್ತಾನೆ.
55 ಆದಾಗ್ಯೂ ನೀವು ಆತನನ್ನು

ಅರಿತುಕೊಂಡಿಲ್ಲ; ಆದರೆ ನಾನು ಆತನನ್ನು ಅರಿತಿದ್ದೇನೆ. ನಾನು ಆತನನ್ನು ಅರಿಯಲಿಲ್ಲವೆಂದು ಹೇಳಿದರೆ ನಿಮ್ಮ ಹಾಗೆ ನಾನೂ ಸುಳ್ಳುಗಾರನಾಗಿ ರುವೆನು; ಆದರೆ ನಾನು ಆತನನ್ನು ಅರಿತಿದ್ದೇನೆ; ಆತನ ಮಾತನ್ನು ಕೈಕೊಂಡಿದ್ದೇನೆ.

56 ನಿಮ್ಮ ತಂದೆಯಾದ ಅಬ್ರಹಾಮನು ನನ್ನ ದಿನವನ್ನು ನೋಡಲು ಸಂತೋಷಿ ಸಿದನು, ಅದನ್ನು ನೋಡಿ ಅವನು ಉಲ್ಲಾಸಗೊಂಡನು ಎಂದು ಹೇಳಿದನು.

57 ಆಗ ಯೆಹೂದ್ಯರು ಆತ ನಿಗೆ--ನಿನಗೆ ಇನ್ನೂ ಐವತ್ತು ವರುಷವಾಗಿಲ್ಲ; ನೀನು ಅಬ್ರಹಾಮನನ್ನು ನೋಡಿದ್ದೀಯೋ

ಅಂದರು.
58 ಯೇಸು ಅವರಿಗೆ--ನಾನು ನಿಮಗೆ
ನಿಜನಿಜವಾಗಿ ಹೇಳುತ್ತೇನೆ,
ಅಬ್ರಹಾಮನಿಗಿಂತ ಮುಂಚೆಯೇ ನಾನು
ಇದ್ದೇನೆ ಅಂದನು.
59 ಆಗ ಅವರು ಆತನ ಮೇಲೆ ಕಲ್ಲುಗಳನ್ನು
ಎಸೆಯಲು ತಕ್ಕೊಂಡರು; ಆದರೆ ಯೇಸು
ಅಡಗಿಕೊಂಡು ಅವರ ಮಧ್ಯದಿಂದ
ದೇವಾಲಯದ ಹೊರಗೆ ಬಂದು ಅಲ್ಲಿಂದ
ಹಾದು ಹೊರಟು ಹೋದನು.

## ಅಧ್ಯಾಯ 9

1 ಯೇಸು ಹಾದುಹೋಗುತ್ತಿರುವಾಗ ಹುಟ್ಟುಕುರುಡನಾಗಿದ್ದ ಒಬ್ಬ ಮನುಷ್ಯನನ್ನು ಕಂಡನು.
2 ಆತನ ಶಿಷ್ಯರು--ಬೋಧಕನೇ, ಇವನು ಕುರುಡನಾಗಿ ಹುಟ್ಟಿರುವದಕ್ಕೆ ಪಾಪಮಾಡಿದವರು ಯಾರು? ಈ ಮನುಷ್ಯನೋ ಅಥವಾ ಇವನ ತಂದೆ ತಾಯಿಗಳೋ ಎಂದು ಆತನನ್ನು ಕೇಳಿದರು;
3 ಯೇಸು ಪ್ರತ್ಯುತ್ತರವಾಗಿ--ಈ ಮನುಷ್ಯನಾಗಲಿ ಇಲ್ಲವೆ ಇವನ ತಂದೆತಾಯಿಗಳಾಗಲಿ ಪಾಪಮಾಡಲಿಲ್ಲ; ಆದರೆ ದೇವರ ಕ್ರಿಯೆಗಳು ಇವನಲ್ಲಿ ಪ್ರಕಟವಾಗುವದಕ್ಕಾ ಗಿಯೇ ಇದಾಯಿತು.

4 ನನ್ನನ್ನು ಕಳುಹಿಸಿದಾತನ ಕೆಲಸ ಗಳನ್ನು
ಹಗಲಿರುವಾಗ ನಾನು ಮಾಡತಕ್ಕದ್ದು; ರಾತ್ರಿ
ಬರುತ್ತದೆ, ಆಗ ಯಾವ ಮನುಷ್ಯನೂ
ಕೆಲಸಮಾಡ ಲಾರನು.
5 ನಾನು ಈ ಲೋಕದಲ್ಲಿರುವವರೆಗೆ
ಲೋಕದ ಬೆಳಕಾಗಿದ್ದೇನೆ ಅಂದನು.
6 ಆತನು ಹೀಗೆ ಮಾತನಾಡಿ ನೆಲದ ಮೇಲೆ
ಉಗುಳಿ ಆ ಉಗುಳಿನಿಂದ ಕೆಸರು ಮಾಡಿ ಆ
ಕೆಸರನ್ನು ಕುರುಡನ ಕಣ್ಣುಗಳಿಗೆ ಹಚ್ಚಿದನು;
7 ಅವನಿಗೆ--ಹೋಗು, ಸಿಲೋವ ಕೊಳ ದಲ್ಲಿ
ತೊಳೆದುಕೋ(ಸಿಲೋವ ಅಂದರೆ
ಕಳುಹಿಸಲ್ಪಟ್ಟ ವನು ಎಂದರ್ಥ) ಅಂದನು.
ಅವನು ಹೋಗಿ ತೊಳೆದುಕೊಂಡು

ದೃಷ್ಟಿಯುಳ್ಳವನಾಗಿ ಬಂದನು.
8 ಹೀಗಿರುವದರಿಂದ ನೆರೆಯವರೂ ಅವನು ಮೊದಲು ಕುರುಡನಾಗಿದ್ದಾಗ ಅವನನ್ನು ನೋಡಿದವರೂ-- ಕೂತುಕೊಂಡು ಭಿಕ್ಷೆ ಬೇಡುತ್ತಿದ್ದವನು ಇವನೇ ಅಲ್ಲವೋ ಅಂದರು.
9 ಕೆಲವರು--ಅವನು ಇವನೇ ಅಂದರು. ಬೇರೆಯವರು--ಇವನು ಅವನ ಹಾಗೆ ಇದ್ದಾನೆ ಅಂದರು. ಆದರೆ ಅವನು--ನಾನೇ ಅವನು ಎಂದು ಹೇಳಿದನು.
10 ಆದದರಿಂದ ಅವರು ಅವ ನಿಗೆ--ನಿನ್ನ ಕಣ್ಣುಗಳು ಹೇಗೆ ತೆರೆಯಲ್ಪಟ್ಟವು ಎಂದು ಕೇಳಲು

11 ಅವನು ಪ್ರತ್ಯುತ್ತರವಾಗಿ--ಯೇಸು ಎಂದು
ಕರೆಯಲ್ಪಟ್ಟ ಮನುಷ್ಯನು ಕೆಸರುಮಾಡಿ ನನ್ನ
ಕಣ್ಣಿಗೆ ಹಚ್ಚಿ ನನಗೆ--ಸಿಲೋವಕೊಳಕ್ಕೆ ಹೋಗಿ
ತೊಳೆದುಕೋ ಎಂದು ಹೇಳಲು ನಾನು
ಹೋಗಿ ತೊಳೆದು ಕೊಂಡು ದೃಷ್ಟಿಯನ್ನು
ಹೊಂದಿದೆನು ಅಂದನು.
12 ಆಗ ಅವರು ಅವನಿಗೆ--ಅವನು
ಎಲ್ಲಿದ್ದಾನೆ? ಅಂದಾಗ ಅವನು--ನನಗೆ
ಗೊತ್ತಿಲ್ಲ ಅಂದನು;
13 ಮೊದಲು ಕುರುಡನಾಗಿದ್ದವನನ್ನು
ಅವರು ಫರಿಸಾ ಯರ ಬಳಿಗೆ
ಕರೆದುಕೊಂಡು ಬಂದರು.
14 ಯೇಸು ಕೆಸರುಮಾಡಿ ಅವನ

ಕಣ್ಣುಗಳನ್ನು ತೆರೆದಾಗ ಅದು ಸಬ್ಬತ್‌ದಿನವಾಗಿತ್ತು.
15 ಆಗ ಫರಿಸಾಯರು ಸಹ ತಿರಿಗಿ ಅವನು ಹೇಗೆ ದೃಷ್ಟಿಹೊಂದಿದ್ದಾನೆಂದು ಅವ ನನ್ನು ಕೇಳಲು ಅವನು ಅವರಿಗೆ--ಆತನು ಕೆಸರನ್ನು ನನ್ನ ಕಣ್ಣುಗಳ ಮೇಲೆ ಇಡಲು ನಾನು ತೊಳೆದುಕೊಂಡ ವನಾಗಿ ನೋಡುತ್ತೇನೆ ಅಂದನು.
16 ತರುವಾಯ ಫರಿಸಾಯರಲ್ಲಿ ಕೆಲವರು--ಈ ಮನುಷ್ಯನು ದೇವರಿಗೆ ಸಂಬಂಧಪಟ್ಟವನಲ್ಲ; ಯಾಕಂದರೆ ಈತನು ಸಬ್ಬತ್ ದಿನವನ್ನು ಕೈಕೊಳ್ಳುವವನಲ್ಲ ಅಂದರು. ಬೇರೆಯ ವರು--ಪಾಪಿಯಾದ

ಒಬ್ಬ ಮನುಷ್ಯನು ಇಂಥ ಅದ್ಭುತ ಕಾರ್ಯಗಳನ್ನು ಹೇಗೆ ಮಾಡುತ್ತಾನೆ ಅಂದರು. ಹೀಗೆ ಅವರಲ್ಲಿ ಭೇದವುಂಟಾ
17 ಅವರು ತಿರಿಗಿ ಕುರುಡನಿಗೆ--ನಿನ್ನ ಕಣ್ಣುಗಳನ್ನು ತೆರೆದಾತನ ವಿಷಯವಾಗಿ ನೀನು ಏನು ಹೇಳುತ್ತೀ ಅಂದಾಗ ಅವನು--ಆತನು ಒಬ್ಬ ಪ್ರವಾದಿ ಅಂದನು.
18 ಆದರೆ ದೃಷ್ಟಿ ಹೊಂದಿದವನ ತಂದೆತಾಯಿ ಗಳನ್ನು ಕರೆಯುವವರೆಗೆ ಯೆಹೂದ್ಯರು ಅವನ ವಿಷಯವಾಗಿ ಅವನು ಕುರುಡನಾಗಿದ್ದು ದೃಷ್ಟಿ ಹೊಂದಿ ದನೆಂದು ನಂಬಲಿಲ್ಲ.
19 ಅವರು--ಕುರುಡನಾಗಿ ಹುಟ್ಟಿದನೆಂದು

ನೀವು ಹೇಳುವ ನಿಮ್ಮ ಮಗನು ಇವನೋ? ಹಾಗಾದರೆ ಈಗ ಅವನು ಹೇಗೆ ನೋಡುತ್ತಾನೆ ಎಂದು ಅವರನ್ನು ಕೇಳಿದರು.
20 ಅವನ ತಂದೆತಾಯಿಗಳು ಪ್ರತ್ಯುತ್ತರವಾಗಿ ಅವರಿಗೆ--ಅವನು ನಮ್ಮ ಮಗನೆಂದೂ ಅವನು ಕುರುಡನಾಗಿ ಹುಟ್ಟಿದ ನೆಂದೂ ನಾವು ಬಲ್ಲೆವು.
21 ಆದರೆ ಅವನು ಈಗ ಯಾವದರ ಮೂಲಕ ನೋಡುತ್ತಾನೋ ನಮಗೆ ಗೊತ್ತಿಲ್ಲ; ಇಲ್ಲವೆ ಯಾರು ಅವನ ಕಣ್ಣುಗಳನ್ನು ತೆರೆದರೋ ಅದೂ ನಮಗೆ ಗೊತ್ತಿಲ್ಲ; ಅವನು ಪ್ರಾಯದವನಾಗಿದ್ದಾನೆ. ಅವನನ್ನೇ ಕೇಳಿರಿ; ಅವನೇ ತನ್ನ ವಿಷಯ

ಮಾತನಾಡುವವನು ಎಂದು ಹೇಳಿದರು.
22 ಅವನ ತಂದೆತಾಯಿಗಳು ಯೆಹೂದ್ಯರಿಗೆ
ಭಯಪಟ್ಟ ದ್ದರಿಂದ ಈ ಮಾತುಗಳನ್ನು
ಹೇಳಿದರು; ಯಾಕಂದರೆ ಯಾವನಾದರೂ
ಆತನು ಕ್ರಿಸ್ತನೆಂದು ಒಪ್ಪಿಕೊಂಡರೆ ಅವನನ್ನು
ಸಭಾಮಂದಿರದಿಂದ ಬಹಿಷ್ಕರಿಸಬೇಕೆಂದು
ಯೆಹೂದ್ಯರು ಆಗಲೇ ನಿರ್ಣಯಿಸಿದ್ದರು.
23 ಆದದ ರಿಂದ ಅವನ ತಂದೆ
ತಾಯಿಗಳು--ಅವನು ಪ್ರಾಯದ
ವನಾಗಿದ್ದಾನಲ್ಲಾ; ಅವನನ್ನೇ ಕೇಳಿರಿ ಎಂದು
ಹೇಳಿದರು.
24 ತರುವಾಯ ಅವರು ಆ ಕುರುಡನಾಗಿದ್ದ
ಮನುಷ್ಯನನ್ನು ಕರೆದು ಅವನಿಗೆ--ದೇವರಿಗೆ

ಸ್ತೋತ್ರ ಸಲ್ಲಿಸು; ಈ ಮನುಷ್ಯನು
ಪಾಪಿಯೆಂದು ನಾವು ಬಲ್ಲೆವು ಅಂದರು.
25 ಅವನು ಪ್ರತ್ಯುತ್ತರವಾಗಿ--ಆತನು
ಪಾಪಿಯೋ ಅಲ್ಲವ್ರೋ ನನಗೆ ಗೊತ್ತಿಲ್ಲ;
ಒಂದು ಮಾತ್ರ ಬಲ್ಲೆನು; ಅದೇನಂದರೆ ನಾನು
ಕುರುಡನಾಗಿದ್ದೆನು; ಈಗ ನಾನು
ನೋಡುತ್ತೇನೆ ಅಂದನು.
26 ಅವರು ತಿರಿಗಿ ಅವನಿಗೆ--ಆತನು ನಿನಗೆ
ಏನು ಮಾಡಿದನು? ಆತನು ನಿನ್ನ
ಕಣ್ಣುಗಳನ್ನು ಹೇಗೆ ತೆರೆದನು ಎಂದು
ಹೇಳಿದ್ದಕ್ಕೆ
27 ಅವನು ಪ್ರತ್ಯುತ್ತರವಾಗಿ ಅವರಿಗೆ--ನಾನು
ನಿಮಗೆ ಆಗಲೇ ಹೇಳಿದ್ದೇನಲ್ಲಾ; ಆದರೆ

ನೀವು ಕೇಳಲಿಲ್ಲ; ನೀವು ಅದನ್ನು ತಿರಿಗಿ ಯಾಕೆ ಕೇಳಬೇಕೆಂದಿದ್ದೀರಿ? ಆತನ ಶಿಷ್ಯರಾಗುವದಕ್ಕೆ ನಿಮಗೂ ಮನಸ್ಸಿದೆಯೋ ಅಂದನು.

28 ಆಗ ಅವರು ಅವನನ್ನು ದೂಷಿಸಿ--ನೀನು ಅವನ ಶಿಷ್ಯನು; ಆದರೆ ನಾವು ಮೋಶೆಯ ಶಿಷ್ಯರು.

29 ಮೋಶೆಯ ಸಂಗಡ ದೇವರು ಮಾತನಾಡಿದನೆಂದು ನಾವು ಬಲ್ಲೆವು; ಆದರೆ ಇವನು ಎಲ್ಲಿಯವನೋ ನಮಗೆ ಗೊತ್ತಿಲ್ಲ ಅಂದರು.

30 ಆಗ ಆ ಮನುಷ್ಯನು ಪ್ರತ್ಯುತ್ತರವಾಗಿ ಅವರಿಗೆ--ಆತನು ನನ್ನ ಕಣ್ಣುಗಳನ್ನು

ತೆರೆದರೂ ಆತನು ಎಲ್ಲಿಯ ವನೆಂದು ನಿಮಗೆ ತಿಳಿಯದೆ ಇರುವದು ಆಶ್ಚರ್ಯವಾದ ವಿಷಯವಲ್ಲವೇ?
31 ದೇವರು ಪಾಪಿಗಳ ಪ್ರಾರ್ಥನೆ ಯನ್ನು ಕೇಳುವದಿಲ್ಲ; ಆದರೆ ಯಾವನಾದರೂ ದೇವ ರನ್ನು ಆರಾಧಿಸುವವನಾಗಿದ್ದು ಆತನ ಚಿತ್ತದಂತೆ ನಡೆದರೆ ಅವನ ಪ್ರಾರ್ಥನೆಯನ್ನು ಆತನು ಕೇಳು ತ್ತಾನೆಂದು ನಾವು ಬಲ್ಲೆವು.
32 ಹುಟ್ಟುಕುರುಡನಾಗಿದ್ದ ಒಬ್ಬ ಮನುಷ್ಯನ ಕಣ್ಣುಗಳನ್ನು ಯಾವನಾದರೂ ತೆರೆದಿ ದ್ದದ್ದನ್ನು ಲೋಕಾದಿಯಿಂದ ಕೇಳಿರಲಿಲ್ಲ.
33 ಈ ಮನುಷ್ಯನು ದೇವರ ಕಡೆಯಿಂದ ಬಂದವನಲ್ಲ ದಿದ್ದರೆ ಏನೂ ಮಾಡಲಾರದೆ

ಇರುತ್ತಿದ್ದನು ಅಂದನು.
34 ಅದಕ್ಕೆ ಅವರು ಅವನಿಗೆ--ನೀನು ಕೇವಲ
ಪಾಪ ದಲ್ಲಿಯೇ ಹುಟ್ಟಿದವನು; ನೀನು
ನಮಗೆ ಬೋಧಿಸು ತ್ತೀಯೋ ಎಂದು ಹೇಳಿ
ಅವನನ್ನು ಹೊರಗೆ ಹಾಕಿದರು.
35 ಅವರು ಅವನನ್ನು ಹೊರಗೆ ಹಾಕಿದ್ದನ್ನು
ಯೇಸು ಕೇಳಿ ಅವನನ್ನು ಕಂಡು ಅವನಿಗೆ--
ನೀನು ದೇವರ ಮಗನನ್ನು ನಂಬುತ್ತೀಯೋ
ಅಂದನು.
36 ಅದಕ್ಕೆ ಅವನು ಪ್ರತ್ಯುತ್ತರವಾಗಿ--ಕರ್ತನೇ,
ನಾನು ಆತನನ್ನು ನಂಬುವಂತೆ ಆತನು
ಯಾರು ಅಂದನು.
37 ಯೇಸು ಅವನಿಗೆ--ನೀನು ಆತನನ್ನು

ನೋಡಿದ್ದೀ; ನಿನ್ನ ಸಂಗಡ
ಮಾತನಾಡುತ್ತಿರುವ ನಾನೇ ಆತನು ಎಂದು
ಹೇಳಿದನು.
38 ಆಗ ಅವನು--ಕರ್ತನೇ, ನಾನು
ನಂಬುತ್ತೇನೆ ಎಂದು ಹೇಳಿ ಆತನನ್ನು
ಆರಾಧಿಸಿದನು.
39 ಯೇಸು--ನೋಡದವರು
ನೋಡುವಂತೆಯೂ ನೋಡುವವರು
ಕುರುಡರಾಗುವಂತೆಯೂ
ನ್ಯಾಯತೀರ್ಪಿಗೋಸ್ಕರ ನಾನು ಈ ಲೋಕಕ್ಕೆ
ಬಂದಿದ್ದೇನೆ ಅಂದನು.
40 ಆತ ನೊಂದಿಗಿದ್ದ ಫರಿಸಾಯರಲ್ಲಿ
ಕೆಲವರು ಈ ಮಾತು ಗಳನ್ನು ಕೇಳಿ--ನಾವು

ಸಹ ಕುರುಡರೋ ಎಂದು ಆತನನ್ನು ಕೇಳಿದರು.
41 ಅದಕ್ಕೆ ಯೇಸು ಅವರಿಗೆ--ನೀವು ಕುರುಡರಾಗಿದ್ದರೆ ನಿಮ್ಮಲ್ಲಿ ಪಾಪವು ಇರುತ್ತಿರ ಲಿಲ್ಲ. ಆದರೆ--ನಾವು ನೋಡುತ್ತೇವೆಂದು ನೀವು ಹೇಳುವದರಿಂದ ನಿಮ್ಮ ಪಾಪವು ಉಳಿದದೆ ಅಂದನು

## ಅಧ್ಯಾಯ 10

1 ನಾನು ನಿಮಗೆ ನಿಜನಿಜವಾಗಿ ಹೇಳು ತ್ತೇನೆ--ಬಾಗಲಿನಿಂದ ಕುರೀಹಟ್ಟಿಯೊಳಗೆ ಬಾರದೆ ಮತ್ತೆಲ್ಲಿಂದಾದರೂ ಹತ್ತಿಬರುವವನೇ

ಕಳ್ಳನೂ ಸುಲುಕೊಳ್ಳುವವನೂ ಆಗಿದ್ದಾನೆ.
2 ಆದರೆ ಬಾಗಲಿ ನಿಂದ ಒಳಗೆ ಬರುವವನು
ಆ ಕುರಿಗಳ ಕುರುಬನಾಗಿ ದ್ದಾನೆ.
3 ಬಾಗಲು ಕಾಯುವವನು ಅವನಿಗೆ
ತೆರೆಯು ತ್ತಾನೆ; ಕುರಿಗಳು ಅವನ ಸ್ವರವನ್ನು
ಕೇಳುತ್ತವೆ, ಅವನು ತನ್ನ ಸ್ವಂತ ಕುರಿಗಳನ್ನು
ಹೆಸರು ಹೇಳಿ ಕರೆದು ಅವು ಗಳನ್ನು ಹೊರಗೆ
ನಡಿಸುತ್ತಾನೆ.
4 ಅವನು ತನ್ನ ಕುರಿ ಗಳನ್ನು ಹೊರಗೆ ಬಿಟ್ಟ
ಮೇಲೆ ಅವುಗಳ ಮುಂದೆ ಹೋಗುತ್ತಾನೆ.
ಕುರಿಗಳು ಅವನ ಸ್ವರವನ್ನು ತಿಳು
ಕೊಳ್ಳುವದರಿಂದ ಅವನನ್ನು ಹಿಂಬಾಲಿಸುತ್ತವೆ;
5 ಅವು ಅನ್ಯನನ್ನು ಹಿಂಬಾಲಿಸದೆ ಅವನ

ಬಳಿಯಿಂದ ಓಡಿ ಹೋಗುವವು; ಅವು
ಅನ್ಯರ ಸ್ವರವನ್ನು ತಿಳಿಯುವದಿಲ್ಲ.
6 ಯೇಸು ಈ ಸಾಮ್ಯವನ್ನು ಅವರಿಗೆ
ಹೇಳಿದನು; ಆದರೆ ಆತನು ಅವರ ಸಂಗಡ
ಮಾತನಾಡಿದ ವಿಷಯಗಳು ಏನಾಗಿದ್ದವು
ಎಂದು ಅವರು ಗ್ರಹಿಸಲಿಲ್ಲ.
7 ಯೇಸು ತಿರಿಗಿ ಅವರಿಗೆ--ನಾನು ನಿಮಗೆ
ನಿಜ ನಿಜವಾಗಿ ಹೇಳುತ್ತೇನೆ, ಕುರಿಗಳಿಗೆ
ನಾನೇ ಬಾಗ ಲಾಗಿದ್ದೇನೆ.
8 ನನಗಿಂತ ಮುಂಚೆ ಬಂದವರೆಲ್ಲರು ಕಳ್ಳರೂ
ಸುಲುಕೊಳ್ಳುವವರೂ ಆಗಿದ್ದಾರೆ. ಆದರೆ
ಕುರಿಗಳು ಅವರಿಗೆ ಕಿವಿಗೊಡಲಿಲ್ಲ.
9 ನಾನೇ ಆಬಾಗಲು; ನನ್ನ ಮೂಲಕವಾಗಿ

ಯಾವನಾದರೂ ಪ್ರವೇಶಿಸಿದರೆ ಅವನು ರಕ್ಷಣೆ ಹೊಂದುವನು; ಇದ ಲ್ಲದೆ ಅವನು ಒಳಗೆ ಹೋಗುತ್ತಾನೆ, ಹೊರಗೆ ಬರು ತ್ತಾನೆ ಮತ್ತು ಮೇವನ್ನು ಕಂಡುಕೊಳ್ಳುತ್ತಾನೆ.
10 ಕಳ್ಳನು ಕದ್ದುಕೊಳ್ಳುವದಕ್ಕೂ ಕೊಲ್ಲುವದಕ್ಕೂ ಹಾಳುಮಾಡು ವದಕ್ಕೂ ಮಾತ್ರ ಬರುತ್ತಾನೇ ಹೊರತು ಮತ್ತಾವದಕ್ಕೂ ಬರುವದಿಲ್ಲ; ನಾನಾದರೋ ಅವುಗಳಿಗೆ ಜೀವವು ಇರಬೇಕೆಂತಲೂ ಸಮೃದ್ಧಿಯು ಇರಬೇಕೆಂತಲೂ ಬಂದೆನು.
11 ನಾನೇ ಒಳ್ಳೇ ಕುರುಬನು; ಒಳ್ಳೇ ಕುರುಬನು ಕುರಿಗಳಿಗೋಸ್ಕರ ತನ್ನ ಪ್ರಾಣವನ್ನು ಕೊಡುತ್ತಾನೆ.

12 ಆದರೆ ಕೂಲಿಯವನು
ಕುರುಬನಲ್ಲವಾದದ ರಿಂದಲೂ ಕುರಿಗಳು
ತನ್ನವುಗಳಲ್ಲವಾದದರಿಂದಲೂ ತೋಳ
ಬರುವದನ್ನು ಕಂಡು ಕುರಿಗಳನ್ನು ಬಿಟ್ಟು ಓಡಿ
ಹೋಗುತ್ತಾನೆ; ಆಗ ತೋಳವು ಕುರಿಗಳನ್ನು
ಹಿಡಿದು ಕೊಂಡು ಅವುಗಳನ್ನು ಚದರಿಸುತ್ತದೆ.
13 ಕೂಲಿಯವನು ಕೂಲಿಯವನೇ
ಆಗಿರುವದರಿಂದ ಕುರಿಗಳಿಗೋಸ್ಕರ ಚಿಂತಿಸದೆ
ಓಡಿ ಹೋಗುತ್ತಾನೆ.
14 ನಾನೇ ಒಳ್ಳೇ ಕುರುಬನು; ನನ್ನ
ಕುರಿಗಳನ್ನು ನಾನು ಬಲ್ಲೆನು. ನನ್ನ ಕುರಿಗಳು
ನನ್ನನ್ನು ತಿಳಿದವೆ.
15 ತಂದೆಯು ನನ್ನನ್ನು ತಿಳಿದಿರುವಂತೆ

ನಾನು ತಂದೆಯನ್ನು ತಿಳಿದಿರುತ್ತೇನೆ; ಕುರಿಗಳಿಗೋಸ್ಕರ ನನ್ನ ಪ್ರಾಣವನ್ನು ಕೊಡುತ್ತೇನೆ.
16 ಇದಲ್ಲದೆ ಈ ಹಟ್ಟಿಗೆ ಸೇರದ ಬೇರೆ ಕುರಿಗಳು ನನಗುಂಟು; ಅವುಗಳನ್ನು ಸಹ ನಾನು ತರಬೇಕು ಮತ್ತು ಅವು ನನ್ನ ಸ್ವರಕ್ಕೆ ಕಿವಿಗೊಡುವವು; ಆಗ ಒಂದೇ ಹಿಂಡು ಆಗುವದು ಮತ್ತು ಒಬ್ಬನೇ ಕುರುಬನು ಇರುವನು.
17 ಯಾಕಂದರೆ ನಾನು ನನ್ನ ಪ್ರಾಣವನ್ನು ತಿರಿಗಿಪಡಕೊಳ್ಳುವಂತೆ ಅದನ್ನು ಕೊಡುತ್ತೇನೆ; ಆದದ ರಿಂದ ನನ್ನ ತಂದೆಯು ನನ್ನನ್ನು ಪ್ರೀತಿಸುತ್ತಾನೆ.

18 ಯಾವ ಮನುಷ್ಯನಾದರೂ ಅದನ್ನು
ನನ್ನಿಂದ ತೆಗೆಯುವದಿಲ್ಲ; ಆದರೆ ನನ್ನಷ್ಟಕ್ಕೆ
ನಾನೇ ಅದನ್ನು ಕೊಡುತ್ತೇನೆ. ನಾನು ಅದನ್ನು
ಕೊಡುವದಕ್ಕೆ ನನಗೆ ಅಧಿಕಾರವಿದೆ; ಅದನ್ನು
ತಿರಿಗಿ ಪಡಕೊಳ್ಳುವದಕ್ಕೆ ನನಗೆ ಅಧಿಕಾರವಿದೆ.
ಈ ಅಪ್ಪಣೆಯನ್ನು ನಾನು ನನ್ನ ತಂದೆ
ಯಿಂದ ಹೊಂದಿದ್ದೇನೆ ಅಂದನು.
19 ಈ ಮಾತುಗಳ ದೆಸೆಯಿಂದ ಯೆಹೂದ್ಯರ
ಮಧ್ಯದಲ್ಲಿ ತಿರಿಗಿ ಭೇದಉಂಟಾಯಿತು.
20 ಅವರಲ್ಲಿ ಅನೇಕರು--ಅವನಿಗೆ ದೆವ್ವ
ಹಿಡಿದದೆ ಮತ್ತು ಹುಚ್ಚನಾಗಿ ದ್ದಾನೆ; ನೀವು
ಯಾಕೆ ಅವನ ಮಾತನ್ನು ಕೇಳುತ್ತೀರಿ
ಅಂದರು.

21 ಬೇರೆಯವರು--ಇವು ದೆವ್ವ ಹಿಡಿದವನ
ಮಾತುಗಳಲ್ಲ, ದೆವ್ವವು ಕುರುಡನ
ಕಣ್ಣುಗಳನ್ನು ತೆರೆ ಯುವದಕ್ಕಾದೀತೇ
ಅಂದರು.
22 ಯೆರೂಸಲೇಮಿನಲ್ಲಿ (ದೇವಾಲಯದ)
ಪ್ರತಿ ಷ್ಠೆಯ ಹಬ್ಬವಿತ್ತು; ಆಗ
ಚಳಿಗಾಲವಾಗಿತ್ತು.
23 ಯೇಸು ದೇವಾಲಯದಲ್ಲಿ
ಸೊಲೊಮೋನನ ದ್ವಾರಾಂಗಳ ದೊಳಗೆ
ತಿರುಗಾಡುತ್ತಿದ್ದನು;
24 ಆಗ ಯೆಹೂದ್ಯರು ಆತನ ಸುತ್ತಲು
ಬಂದು ಆತನಿಗೆ--ಇನ್ನು ಎಷ್ಟರ ವರೆಗೆ
ನಮ್ಮನ್ನು ಸಂದೇಹಪಡಿಸುತ್ತೀ? ನೀನು ಕ್ರಿಸ್ತ

ನಾಗಿದ್ದರೆ ನಮಗೆ ಸ್ಪಷ್ಟವಾಗಿ ಹೇಳು ಅಂದರು.
25 ಯೇಸು ಅವರಿಗೆ--ನಾನು ನಿಮಗೆ
ಹೇಳಿದೆನು, ಆದರೆ ನೀವು ನಂಬಲಿಲ್ಲ; ನನ್ನ
ತಂದೆಯ ಹೆಸರಿನಲ್ಲಿ ನಾನು ಮಾಡುವ
ಕ್ರಿಯೆಗಳೇ ನನ್ನ ವಿಷಯವಾಗಿ
ಸಾಕ್ಷಿಕೊಡುತ್ತವೆ.
26 ಆದರೆ ನಾನು ನಿಮಗೆ ಹೇಳಿದಂತೆ ನೀವು
ನನ್ನ ಕುರಿಗಳಲ್ಲವಾದದರಿಂದ ನಂಬದೆ
ಇದ್ದೀರಿ.
27 ನನ್ನ ಕುರಿಗಳು ನನ್ನ ಸ್ವರಕ್ಕೆ
ಕಿವಿಗೊಡುತ್ತವೆ, ನಾನು ಅವುಗಳನ್ನು ಬಲ್ಲೆನು;
ಅವು ನನ್ನನ್ನು ಹಿಂಬಾಲಿಸುತ್ತವೆ.
28 ನಾನು ಅವುಗಳಿಗೆ ನಿತ್ಯಜೀವವನ್ನು

ಕೊಡುತ್ತೇನೆ; ಅವು ಎಂದಿಗೂ
ನಾಶವಾಗುವದಿಲ್ಲ; ಇಲ್ಲವೆ ಅವು ಗಳನ್ನು
ಯಾವನೂ ನನ್ನ ಕೈಯೊಳಗಿಂದ ಕಸಕೊಳ್ಳ
ಲಾರನು.
29 ಅವುಗಳನ್ನು ನನಗೆ ಕೊಟ್ಟ ನನ್ನ
ತಂದೆಯು ಎಲ್ಲರಿಗಿಂತಲೂ ದೊಡ್ಡವನು;
ನನ್ನ ತಂದೆಯ ಕೈಯೊಳ ಗಿಂದ ಅವುಗಳನ್ನು
ಯಾವನೂ ಕಸಕೊಳ್ಳಲಾರನು.
30 ನಾನು ಮತ್ತು ನನ್ನ ತಂದೆಯು
ಒಂದಾಗಿದ್ದೇವೆ ಎಂದು ಉತ್ತರಕೊಟ್ಟನು.
31 ಆಗ ಯೆಹೂದ್ಯರು ತಿರಿಗಿ ಆತನನ್ನು
ಕೊಲ್ಲುವ ದಕ್ಕಾಗಿ ಕಲ್ಲುಗಳನ್ನು ತಕ್ಕೊಂಡರು.
32 ಅದಕ್ಕೆ ಯೇಸು ಅವರಿಗೆ--ನನ್ನ

ತಂದೆಯಿಂದ ಅನೇಕ ಒಳ್ಳೇ ಕಾರ್ಯ ಗಳನ್ನು ನಾನು ನಿಮಗೆ ತೋರಿಸಿದ್ದೇನೆ; ಅವುಗಳಲ್ಲಿ ಯಾವ ಕಾರ್ಯಗಳಿಗೋಸ್ಕರ ನೀವು ನನ್ನ ಮೇಲೆ ಕಲ್ಲೆಸೆಯಬೇಕೆಂದಿದ್ದೀರಿ ಎಂದು ಕೇಳಿದನು.

33 ಅದಕ್ಕೆ ಯೆಹೂದ್ಯರು ಪ್ರತ್ಯುತ್ತರವಾಗಿ ಆತನಿಗೆ--ಒಳ್ಳೇ ಕಾರ್ಯಗಳಿಗೋಸ್ಕರವಲ್ಲ, ದೇವದೂಷಣೆಗೋಸ್ಕ ರವೂ ನೀನು ಮನುಷ್ಯನಾಗಿದ್ದು ನಿನ್ನನ್ನು ನೀನೇ ದೇವರಾಗಿ ಮಾಡಿಕೊಳ್ಳುವದಕ್ಕೋಸ್ಕರವೂ ನಾವು ನಿನ್ನ ಮೇಲೆ ಕಲ್ಲೆಸೆಯುತ್ತೇವೆ ಅಂದರು.

34 ಯೇಸು ಪ್ರತ್ಯುತ್ತರವಾಗಿ ಅವರಿಗೆ--ನೀವು ದೇವರುಗಳಾ ಗಿದ್ದೀರಿ ಎಂದು ನಾನು

ಹೇಳಿದೆನು ಎಂಬದಾಗಿ ನಿಮ್ಮ ನ್ಯಾಯಪ್ರಮಾಣದಲ್ಲಿ ಬರೆದಿರುವದಿಲ್ಲವ್ರೋ?
35 ಹಾಗಾದರೆ ದೇವರವಾಕ್ಯವನ್ನು ಹೊಂದಿದವರು ದೇವರುಗಳೆಂದು ಆತನು ಕರೆದಿರುವಲ್ಲಿ ಬರಹವು ವ್ಯರ್ಥವಾಗಲಾರದಷ್ಟೆ
36 ತಂದೆಯು ಪ್ರತಿಷ್ಠೆಮಾಡಿ ಲೋಕಕ್ಕೆ ಕಳುಹಿಸಿಕೊಟ್ಟವನಾದ ನಾನು ದೇವರ ಮಗನಾಗಿದ್ದೇನೆಂದು ಹೇಳಿದ್ದಕ್ಕೆ--ನೀನು ದೇವ ದೂಷಣೆ ಮಾಡುತ್ತೀ ಎಂದು ನೀವು ಅನ್ನುತ್ತೀರೋ?
37 ನನ್ನ ತಂದೆಯ ಕಾರ್ಯಗಳನ್ನು ನಾನು ಮಾಡದೆ ಹೋದರೆ ನನ್ನನ್ನು ನಂಬಬೇಡಿರಿ.

38 ನಾನು ಮಾಡಿ ದರೂ ನೀವು ನನ್ನನ್ನು
ನಂಬದಿದ್ದರೆ ತಂದೆಯು ನನ್ನ ಲ್ಲಿಯೂ
ನಾನು ಆತನಲ್ಲಿಯೂ ಇರುವದನ್ನು ನೀವು
ತಿಳಿದುಕೊಂಡು ನಂಬುವಂತೆ ಈ
ಕಾರ್ಯಗಳನ್ನಾದರೂ ನಂಬಿರಿ ಅಂದನು.
39 ಆದದರಿಂದ ತಿರಿಗಿ ಅವರು ಆತನನ್ನು
ಹಿಡಿಯುವದಕ್ಕೆ ಹುಡುಕಿದರು; ಆದರೆ
ಆತನು ಅವರ ಕೈಯಿಂದ ತಪ್ಪಿಸಿಕೊಂಡು
40 ಯೋಹಾನನು ಮೊದಲು ಬಾಪ್ತಿಸ್ಮ
ಮಾಡಿಸುತ್ತಿದ್ದ ಸ್ಥಳವಾದ ಯೊರ್ದನಿನ ಆಚೆಗೆ
ತಿರಿಗಿಹೋಗಿ ಅಲ್ಲಿ ವಾಸಿಸಿದನು.
41 ಆಗ ಅನೇಕರು ಆತನ ಬಳಿಗೆ ಬಂದು--
ಯೋಹಾನನು ಅದ್ಭುತಕಾರ್ಯಗಳನ್ನು

ಮಾಡಲಿಲ್ಲ; ಆದರೆ ಈ ಮನುಷ್ಯನ
ವಿಷಯವಾಗಿ ಯೋಹಾನನು ಹೇಳಿದ್ದೆಲ್ಲವೂ
ನಿಜವಾಗಿದೆ ಅಂದರು.
42 ಅಲ್ಲಿ ಅನೇಕರು ಆತನ ಮೇಲೆ
ನಂಬಿಕೆಯಿಟ್ಟರು.

## ಅಧ್ಯಾಯ 11

1 ಮರಿಯಳ ಮತ್ತು ಆಕೆಯ ಸಹೋದರಿ
ಯಾದ ಮಾರ್ಥಳ ಊರಾದ ಬೇಥಾನ್ಯದಲ್ಲಿ
ಲಾಜರನೆಂಬವನೊಬ್ಬನು ಅಸ್ವಸ್ಥನಾಗಿದ್ದನು.
2 (ಕರ್ತನಿಗೆ ತೈಲವನ್ನು ಹಚ್ಚಿ ತನ್ನ
ತಲೇಕೂದಲಿನಿಂದ ಆತನ ಪಾದಗಳನ್ನು

ಒರಸಿದ ಈ ಮರಿಯಳ ಸಹೋ ದರನಾದ ಲಾಜರನು ಅಸ್ವಸ್ಥನಾಗಿದ್ದನು).
3 ಆದದ ರಿಂದ ಅವನ ಸಹೋದರಿಯರು--ಕರ್ತನೇ, ಇಗೋ, ನೀನು ಪ್ರೀತಿಮಾಡುತ್ತಿರುವವನು ಅಸ್ವಸ್ಥನಾಗಿದ್ದಾನೆ ಎಂದು ಆತನಿಗೆ ಹೇಳಿಕಳುಹಿಸಿದರು.
4 ಯೇಸು ಅದನ್ನು ಕೇಳಿ--ಈ ರೋಗವು ಮರಣಕ್ಕಾಗಿಯಲ್ಲ, ಆದರೆ ದೇವಕುಮಾರನು ಅದರಿಂದ ಮಹಿಮೆ ಹೊಂದುವಂತೆ ದೇವರ ಮಹಿಮೆಗೋಸ್ಕರವೇ ಬಂದದ್ದು ಎಂದು ಹೇಳಿದನು.
5 ಮಾರ್ಥಳನ್ನೂ ಅವಳ ಸಹೋದರಿಯನ್ನೂ ಲಾಜರನನ್ನೂ ಯೇಸು ಪ್ರೀತಿಸು ತ್ತಿದ್ದನು.

6 ಅವನು ಅಸ್ವಸ್ಥನಾಗಿದ್ದಾನೆಂದು ಆತನು
ಕೇಳಿ ದರೂ ಎರಡು ದಿವಸ ತಾನಿದ್ದ ಸ್ಥಳದಲ್ಲೇ
ಉಳಿದನು.
7 ತರುವಾಯ ಆತನು ತನ್ನ ಶಿಷ್ಯರಿಗೆ--ನಾವು
ತಿರಿಗಿ ಯೂದಾಯಕ್ಕೆ ಹೋಗೋಣ
ಅಂದನು.
8 ಆತನ ಶಿಷ್ಯರು ಆತನಿಗೆ--ಬೋಧಕನೇ,
ಆಗಲೇ ಯೆಹೂದ್ಯರು ನಿನ್ನ ಮೇಲೆ
ಕಲ್ಲೆಸೆಯಬೇಕೆಂದು ಹುಡುಕುತ್ತಿ ದ್ದರಲ್ಲಾ;
ತಿರಿಗಿ ನೀನು ಅಲ್ಲಿಗೆ ಹೋಗುತ್ತೀಯೋ?
ಅಂದರು.
9 ಯೇಸು--ಹಗಲಿಗೆ ಹನ್ನೆರಡು ತಾಸುಗಳು
ಇವೆಯಲ್ಲವೇ? ಯಾವ ಮನುಷ್ಯನಾದರೂ

ಹಗಲಿ ನಲ್ಲಿ ತಿರುಗಾಡಿದರೆ ಈ ಲೋಕದ
ಬೆಳಕನ್ನು ನೋಡು ವದರಿಂದ ಅವನು
ಎಡವುವದಿಲ್ಲ.
10 ಆದರೆ ಒಬ್ಬ ಮನುಷ್ಯನು ರಾತ್ರಿಯಲ್ಲಿ
ತಿರುಗಾಡಿದರೆ ತನ್ನಲ್ಲಿ ಬೆಳಕು
ಇಲ್ಲವಾದದರಿಂದ ಅವನು ಎಡವುತ್ತಾನೆ
ಎಂದು ಉತ್ತರಕೊಟ್ಟನು.
11 ಈ ಮಾತುಗಳನ್ನು ಹೇಳಿದ ತರುವಾಯ
ಆತನು ಅವರಿಗೆ--ನಮ್ಮ ಸ್ನೇಹಿತನಾದ
ಲಾಜರನು ನಿದ್ರಿಸುತ್ತಿದ್ದಾನೆ; ಆದರೆ ನಾನು
ಅವನನ್ನು ನಿದ್ರೆಯಿಂದ ಎಬ್ಬಿಸುವದಾಕ್ಕಾಗಿ
ಹೋಗುತ್ತೇನೆ ಎಂದು ಹೇಳಿದನು.
12 ಆಗ ಆತನ ಶಿಷ್ಯರು--ಕರ್ತನೇ, ಅವನು

ನಿದ್ರೆಮಾಡುತ್ತಿದ್ದರೆ ಸ್ವಸ್ಥನಾಗುವನು ಅಂದರು.
13 ಆದರೆ ಯೇಸು ಅವನ ಮರಣದ ವಿಷಯವಾಗಿ ಹೇಳಿದ್ದನು; ಆದರೆ ಅವರು ನಿದ್ರೆಯಲ್ಲಿಯ ವಿಶ್ರಾಂತಿ ಕುರಿತು ಆತನು ಹೇಳಿದ ನೆಂದು ಯೋಚಿಸಿದರು.
14 ಆಗ ಯೇಸು ಸ್ಪಷ್ಟವಾಗಿ ಅವರಿಗೆ--ಲಾಜರನು ಸತ್ತಿದ್ದಾನೆ.
15 ನೀವು ನಂಬು ವಂತೆ ನಿಮಗೋಸ್ಕರ ನಾನು ಅಲ್ಲಿ ಇಲ್ಲದಿರುವದಕ್ಕೆ ಸಂತೋಷಪಡುತ್ತೇನೆ; ಹೇಗೂ ನಾವು ಅವನ ಬಳಿಗೆ ಹೋಗೋಣ ಎಂದು ಅವರಿಗೆ ಹೇಳಿದನು.
16 ತರು ವಾಯ ದಿದುಮನೆಂಬ

ತೋಮನು ತನ್ನ ಜೊತೆ ಶಿಷ್ಯರಿಗೆ--ನಾವು ಸಹ
ಆತನೊಂದಿಗೆ ಸಾಯುವಂತೆ ಹೋಗೋಣ
ಅಂದನು.
17 ತರುವಾಯ ಯೇಸು ಬಂದಾಗ
ಲಾಜರನನ್ನು ಸಮಾಧಿಯಲ್ಲಿಟ್ಟು ಆಗಲೇ
ನಾಲ್ಕು ದಿವಸಗಳಾಗಿದ್ದ ವೆಂದು ಆತನು
ತಿಳಿದುಕೊಂಡನು;
18 ಬೇಥಾನ್ಯವು ಯೆರೂಸಲೇಮಿಗೆ
ಹೆಚ್ಚುಕಡಿಮೆ ಒಂದು ಹರದಾರಿ ಯಷ್ಟು
ಸವಿಾಪದಲ್ಲಿತ್ತು.
19 ಯೆಹೂದ್ಯರಲ್ಲಿ ಅನೇಕರು ಮಾರ್ಥಳನ್ನು
ಮತ್ತು ಮರಿಯಳನ್ನು ಅವರ ಸಹೋ ದರನ
ವಿಷಯವಾಗಿ ಆದರಿಸುವದಕ್ಕೆ ಬಂದಿದ್ದರು.

20 ಆಗ ಯೇಸು ಬರುತ್ತಿದ್ದಾನೆಂದು
ಮಾರ್ಥಳು ಕೇಳು ತ್ತಲೇ ಹೋಗಿ ಆತನನ್ನು
ಎದುರುಗೊಂಡಳು. ಮರಿಯಳಾದರೋ
ಮನೆಯಲ್ಲಿಯೇ ಕೂತುಕೊಂಡಿ ದ್ದಳು.
21 ಆಗ ಮಾರ್ಥಳು ಯೇಸುವಿಗೆ--
ಕರ್ತನೇ, ನೀನು ಇಲ್ಲಿ ಇರುತ್ತಿದ್ದರೆ ನನ್ನ
ಸಹೋದರನು ಸಾಯು ತ್ತಿರಲಿಲ್ಲ.
22 ಆದರೆ ಈಗಲೂ ಸಹ ನೀನು ದೇವರಿಂದ
ಏನು ಕೇಳಿಕೊಳ್ಳುತ್ತೀಯೋ ದೇವರು
ಅದನ್ನು ನಿನಗೆ ಕೊಡುವನೆಂದು ನಾನು
ಬಲ್ಲೆನು ಅಂದಳು.
23 ಯೇಸು ಆಕೆಗೆ--ನಿನ್ನ ಸಹೋದರನು
ತಿರಿಗಿ ಎದ್ದೇಳುವನು ಎಂದು ಹೇಳಿದನು.

24 ಮಾರ್ಥಳು ಆತನಿಗೆ--ಕಡೇ ದಿನದಲ್ಲಿ
ಪುನರುತ್ಥಾನವಾಗುವಾಗ ಅವನೂ ತಿರಿಗಿ
ಎದ್ದೇಳುವನೆಂದು ನಾನು ಬಲ್ಲೆನು ಎಂದು
ಹೇಳಿದಳು.
25 ಯೇಸು ಆಕೆಗೆ--ನಾನೇ
ಪುನರುತ್ಥಾನವೂ ಜೀವವೂ ಆಗಿದ್ದೇನೆ;
ನನ್ನಲ್ಲಿ ನಂಬಿಕೆ ಇಡುವವನು ಸತ್ತರೂ
ಬದುಕುವನು;
26 ಯಾವನಾದರೂ ಬದುಕುತ್ತಾ ನನ್ನಲ್ಲಿ
ನಂಬಿಕೆಯಿಡುವದಾದರೆ ಅವನು ಎಂದಿಗೂ
ಸಾಯುವ ದಿಲ್ಲ. ಇದನ್ನು ನೀನು
ನಂಬುತ್ತೀಯೋ ಎಂದು ಕೇಳಿದ್ದಕ್ಕೆ
27 ಆಕೆಯು ಆತನಿಗೆ--ಹೌದು, ಕರ್ತನೇ,

ಲೋಕಕ್ಕೆ ಬರಬೇಕಾಗಿದ್ದ ದೇವರಮಗನಾದ
ಕ್ರಿಸ್ತನು ನೀನೇ ಎಂದು ನಾನು ನಂಬುತ್ತೇನೆ
ಅಂದಳು.
28 ಆಕೆಯು ಹೀಗೆ ಹೇಳಿದ ಮೇಲೆ
ಹೊರಟು ಹೋಗಿ ತನ್ನ ಸಹೋದರಿಯಾದ
ಮರಿಯಳನ್ನು ಗುಪ್ತ ವಾಗಿ ಕರೆದು--
ಬೋಧಕನು ಬಂದಿದ್ದಾನೆ, ನಿನ್ನನ್ನು
ಕರೆಯುತ್ತಾನೆ ಅಂದಳು.
29 ಆಕೆಯು ಇದನ್ನು ಕೇಳಿದ ಕೂಡಲೆ
ತಟ್ಟನೆ ಎದ್ದು ಆತನ ಬಳಿಗೆ ಬಂದಳು.
30 ಯೇಸು ಇನ್ನೂ ಊರೊಳಕ್ಕೆ ಬಾರದೆ
ಮಾರ್ಥಳು ಆತನನ್ನು ಸಂಧಿಸಿದ ಸ್ಥಳದಲ್ಲಿಯೇ
ಇದ್ದನು.

31 ಮನೆ ಯಲ್ಲಿ ಆಕೆಯ ಕೂಡ ಇದ್ದು
ಆಕೆಯನ್ನು ಆದರಿಸುತ್ತಿದ್ದ ಯೆಹೂದ್ಯರು
ಆಕೆಯು ತಟ್ಟನೆ ಎದ್ದು ಹೊರಗೆ
ಹೋಗುವದನ್ನು ನೋಡಿ--ಆಕೆಯು
ಅಳುವದಕ್ಕಾಗಿ ಸಮಾಧಿಯ ಬಳಿಗೆ
ಹೋಗುತ್ತಾಳೆಂದು ತಿಳಿದು ಆಕೆ ಯನ್ನು
ಹಿಂಬಾಲಿಸಿದರು.
32 ತರುವಾಯ ಯೇಸು ಇದ್ದ ಸ್ಥಳಕ್ಕೆ
ಮರಿಯಳು ಬಂದು ಆತನನ್ನು ಕಂಡು ಆತನ
ಪಾದಗಳಿಗೆ ಬಿದ್ದು ಆತನಿಗೆ--ಕರ್ತನೇ, ನೀನು
ಇಲ್ಲಿ ಇರುತ್ತಿದ್ದರೆ ನನ್ನ ಸಹೋದರನು
ಸಾಯುತ್ತಿರಲಿಲ್ಲ ಎಂದು ಹೇಳಿದಳು.
33 ಆಕೆಯು ಅಳುವದನ್ನು ಮತ್ತು

ಆಕೆಯೊಂದಿಗೆ ಬಂದ ಯೆಹೂದ್ಯರು ಸಹ
ಅಳುವದನ್ನು ಯೇಸು ನೋಡಿದಾಗ ಆತ್ಮದಲ್ಲಿ
ಕಳವಳಪಟ್ಟು ಮೂಲ್ಗುತ್ತಾ--
34 ಅವನನ್ನು ಎಲ್ಲಿ ಇಟ್ಟಿದ್ದೀರಿ ಅಂದನು.
ಅವರು ಆತನಿಗೆ--ಕರ್ತನೇ, ಬಂದು ನೋಡು
ಅಂದರು.
35 ಯೇಸು ಅತ್ತನು.
36 ಆಗ ಯೆಹೂದ್ಯ ರು--ಇಗೋ, ಆತನು
ಅವನನ್ನು ಎಷ್ಟು ಪ್ರೀತಿ ಮಾಡಿದನಲ್ಲಾ
ಅಂದರು.
37 ಅವರಲ್ಲಿ ಕೆಲ ವರು--ಆ ಕುರುಡನ
ಕಣ್ಣುಗಳನ್ನು ತೆರೆದ ಈ ಮನುಷ್ಯನು
ಇವನನ್ನೂ ಸಾಯದಹಾಗೆ ಮಾಡಲಾರದೆ

ಇದ್ದನೇ ಅಂದರು.
38 ಆದದರಿಂದ ಯೇಸು ತಿರಿಗಿ ತನ್ನಲ್ಲಿ ಮೂಲ್ಗುತ್ತಾ ಸಮಾಧಿಗೆ ಬಂದನು. ಅದು ಗವಿಯಾಗಿತ್ತು; ಒಂದು ಕಲ್ಲು ಅದರ ಮೇಲೆ ಇಟ್ಟಿತ್ತು.
39 ಯೇಸು--ಆ ಕಲ್ಲನ್ನು ತೆಗೆದುಹಾಕಿರಿ ಅಂದನು. ಅದಕ್ಕೆ ಸತ್ತುಹೋದವನ ಸಹೋದರಿಯಾದ ಮಾರ್ಥಳು ಆತನಿಗೆ--ಕರ್ತನೇ, ಇಷ್ಟರೊಳಗೆ ಅವನು ನಾರುತ್ತಾನೆ; ಯಾಕಂದರೆ ಅವನು ಸತ್ತು ನಾಲ್ಕು ದಿನಗಳಾದವು ಅಂದಳು.
40 ಯೇಸು ಆಕೆಗೆ--ನೀನು ನಂಬುವದಾದರೆ ದೇವರ ಮಹಿಮೆಯನ್ನು ನೋಡುವಿ ಎಂದು

ನಾನು ನಿನಗೆ ಹೇಳಲಿಲ್ಲವೇ ಅಂದನು.
41 ಆಗ ಅವರು ಸತ್ತವನನ್ನು ಇಟ್ಟಿದ್ದ ಸ್ಥಳದಿಂದ ಕಲ್ಲನ್ನು ತೆಗೆದುಹಾಕಿದರು. ಯೇಸು ಕಣ್ಣೆತ್ತಿ ಮೇಲಕ್ಕೆ ನೋಡಿ--ತಂದೆಯೇ, ನೀನು ನನ್ನ ಪ್ರಾರ್ಥನೆಯನ್ನು ಕೇಳಿದ್ದಕ್ಕೆ ನಾನು ನಿನ್ನನ್ನು ಕೊಂಡಾಡುತ್ತೇನೆ.
42 ನೀನು ನನ್ನ ಪ್ರಾರ್ಥನೆಯನ್ನು ಯಾವಾಗಲೂ ಕೇಳುತ್ತೀ ಎಂದು ನಾನು ಬಲ್ಲೆನು. ಆದರೆ ನನ್ನ ಹತ್ತಿರದಲ್ಲಿ ನಿಂತಿರುವ ಜನರ ನಿಮಿತ್ತವಾಗಿ ನೀನು ನನ್ನನ್ನು ಕಳುಹಿಸಿದ್ದೀ ಎಂದು ಅವರು ನಂಬುವಂತೆ ನಾನು ಅದನ್ನು ಹೇಳಿದೆನು ಅಂದನು.
43 ಆತನು ಹೀಗೆ ಮಾತನಾಡಿದ ಮೇಲೆ--

ಲಾಜರನೇ, ಹೊರಗೆ ಬಾ ಎಂದು
ಗಟ್ಟಿಯಾದ ಸ್ವರದಿಂದ ಕೂಗಿದನು.
44 ಆಗ ಪ್ರೇತ ವಸ್ತ್ರಗಳಿಂದ ಕೈಕಾಲುಗಳನ್ನು
ಕಟ್ಟಿದ್ದ ಆ ಸತ್ತವನು ಹೊರಗೆ ಬಂದನು.
ಅವನ ಮುಖವು ವಸ್ತ್ರ ದಿಂದ ಸುತ್ತಲ್ಪಟ್ಟಿತ್ತು;
ಯೇಸು ಅವರಿಗೆ--ಅವನನ್ನು ಬಿಚ್ಚಿರಿ, ಅವನು
ಹೋಗಲಿ ಎಂದು ಹೇಳಿದನು.
45 ಆಗ ಮರಿಯಳ ಬಳಿಗೆ ಬಂದಿದ್ದ
ಯೆಹೂದ್ಯ ರಲ್ಲಿ ಅನೇಕರು ಯೇಸು
ಮಾಡಿದವುಗಳನ್ನು ನೋಡಿ ಆತನಲ್ಲಿ
ನಂಬಿಕೆಯಿಟ್ಟರು.
46 ಆದರೆ ಅವರಲ್ಲಿ ಕೆಲವರು ಫರಿಸಾಯರ
ಬಳಿಗೆ ಹೋಗಿ ಯೇಸು ಮಾಡಿದವುಗಳನ್ನು

ಅವರಿಗೆ ಹೇಳಿದರು.
47 ಆಗ ಪ್ರಧಾನಯಾಜಕರೂ ಫರಿಸಾಯರೂ ಆಲೋಚನಾ ಸಭೆಯನ್ನು ಕೂಡಿಸಿ--ಈ ಮನುಷ್ಯನು ಅನೇಕ ಅದ್ಭುತಕಾರ್ಯಗಳನ್ನು ಮಾಡುತ್ತಾನಲ್ಲಾ, ನಾವು ಏನು ಮಾಡೋಣ?
48 ನಾವು ಅವನನ್ನು ಹಾಗೆಯೇ ಬಿಟ್ಟರೆ ಎಲ್ಲರೂ ಅವನ ಮೇಲೆ ನಂಬಿಕೆಯಿಡುವರು ಮತ್ತು ರೋಮಾಯರು ಬಂದು ನಮ್ಮ ಸ್ಥಳವನ್ನೂ ಜನಾಂಗವನ್ನೂ ತೆಗೆದುಕೊಂಡು ಬಿಟ್ಟಾರು ಅಂದರು.
49 ಆದರೆ ಅವರಲ್ಲಿ ಆ ವರುಷದ ಮಹಾಯಾಜಕ ನಾದ ಕಾಯಫನೆಂಬವನು

ಅವರಿಗೆ--
50 ನಿಮಗೆ ಏನೂ ತಿಳಿಯದು; ಜನಾಂಗವೆಲ್ಲಾ ನಾಶವಾಗದ ಹಾಗೆ ಒಬ್ಬ ಮನುಷ್ಯನು ಜನರಿಗೋಸ್ಕರ ಸಾಯುವದು ನಮಗೆ ವಿಹಿತವಾಗಿದೆ ಎಂದು ನೀವು ಯೋಚಿಸುವದೂ ಇಲ್ಲ ಅಂದನು.
51 ಈ ಮಾತನ್ನು ತನ್ನಷ್ಟಕ್ಕೆ ತಾನೇ ಮಾತನಾಡಲಿಲ್ಲ; ಆದರೆ ಅವನು ಆ ವರುಷದಲ್ಲಿ ಮಹಾಯಾಜಕನಾಗಿದ್ದು ಯೇಸು ಆ ಜನಾಂಗಕ್ಕೋಸ್ಕರ ಮಾತ್ರವಲ್ಲದೆ
52 ಚದರಿರುವ ದೇವರ ಮಕ್ಕಳನ್ನು ಒಟ್ಟುಗೂಡಿಸುವದಕ್ಕೂ ಆತನು ಸಾಯಬೇಕಾಗಿದೆ ಎಂದು ಅವನು

ಪ್ರವಾದಿಸಿದನು.
53 ಅವರು ಕೂಡಿ ಕೊಂಡು ಆ ದಿನದಿಂದ ಆತನನ್ನು ಕೊಲ್ಲಬೇಕೆಂದು ಆಲೋಚನೆ ಮಾಡಿಕೊಂಡರು.
54 ಹೀಗಿರುವದರಿಂದ ಯೇಸು ಯೆಹೂದ್ಯರ ಮಧ್ಯದಲ್ಲಿ ಬಹಿರಂಗವಾಗಿ ತಿರುಗಾಡಲಿಲ್ಲ. ಆದರೆ ಅಲ್ಲಿಂದ ಅಡವಿಗೆ ಸವಿಾಪ ದಲ್ಲಿದ್ದ ಪ್ರದೇಶದ ಎಫ್ರಾಯಿಮ್ ಎಂಬ ಪಟ್ಟಣಕ್ಕೆ ಹೋಗಿ ಅಲ್ಲಿ ತನ್ನ ಶಿಷ್ಯರ ಸಂಗಡ ಇದ್ದನು.
55 ಆಗ ಯೆಹೂದ್ಯರ ಪಸ್ಕವು ಹತ್ತಿರವಾಗಿತ್ತು; ಅನೇಕರು ತಮ್ಮನ್ನು ಶುದ್ಧಿ ಮಾಡಿಕೊಳ್ಳುವದಕ್ಕೋಸ್ಕರ ಪಸ್ಕಕ್ಕೆ ಮುಂಚೆ ಹಳ್ಳಿಗಳಿಂದ ಯೆರೂಸಲೇಮಿಗೆ ಹೋದರು.

56 ಆಗ ಅವರು ಯೇಸುವನ್ನು ಹುಡುಕು
ವವರಾಗಿ ದೇವಾಲಯದಲ್ಲಿ
ನಿಂತುಕೊಂಡಿದ್ದಾಗ--ಆತನು ಹಬ್ಬಕ್ಕೆ
ಬರುವದಿಲ್ಲವೋ? ನಿಮಗೆ ಹೇಗೆ ಕಾಣುತ್ತದೆ
ಎಂದು ತಮ್ಮತಮ್ಮೊಳಗೆ ಮಾತನಾಡಿ
ಕೊಂಡರು.
57 ಆಗ ಪ್ರಧಾನಯಾಜಕರೂ ಫರಿಸಾಯ
ರೂ ಆತನನ್ನು ಹಿಡಿಯುವಂತೆ ಆತನಿರುವ
ಸ್ಥಳವು ಯಾರಿಗಾದರೂ ತಿಳಿದರೆ ಅವರು
ತಮಗೆ ತೋರಿಸ ಬೇಕೆಂದು ಅಪ್ಪಣೆ
ಕೊಟ್ಟಿದ್ದರು.

# ಅಧ್ಯಾಯ 12

1 ಇದಾದ ಮೇಲೆ ಪಸ್ಕಕ್ಕೆ ಆರು ದಿನಗಳ
ಮುಂಚೆ ಸತ್ತವರೊಳಗಿಂದ ಎಬ್ಬಿಸಿದ
ಲಾಜರನು ಇದ್ದ ಬೇಥಾನ್ಯಕ್ಕೆ ಯೇಸು
ಬಂದನು.
2 ಅಲ್ಲಿ ಅವರು ಆತನಿಗಾಗಿ ಔತಣವನ್ನು ಸಿದ್ಧ
ಮಾಡಿದರು; ಮಾರ್ಥಳು ಉಪಚಾರ
ಮಾಡಿದಳು. ಆತನೊಂದಿಗೆ ಊಟಕ್ಕೆ
ಕೂತವರಲ್ಲಿ ಲಾಜರನೂ ಒಬ್ಬನಾಗಿದ್ದನು.
3 ಆಗ ಮರಿಯಳು ಬಹು ಬೆಲೆಯುಳ್ಳ ಅಚ್ಚ
ಜಟಾಮಾಂಸಿ ತೈಲವನ್ನು ಒಂದು ಸೇರಷ್ಟು
ತಂದು ಯೇಸುವಿನ ಪಾದಕ್ಕೆ ಹಚ್ಚಿ ತನ್ನ

ತಲೆಯ ಕೂದಲಿನಿಂದ ಆತನ ಪಾದಗಳನ್ನು
ಒರಸಿದಳು; ಆ ತೈಲದ ಪರಿ ಮಳವು
ಮನೆಯಲ್ಲಿ ತುಂಬಿಕೊಂಡಿತ್ತು.
4 ಆಗ ಆತನ ಶಿಷ್ಯರಲ್ಲಿ ಒಬ್ಬನು ಅಂದರೆ
ಆತನನ್ನು ಹಿಡಿದು ಕೊಡುವದಕ್ಕಿದ್ದ
ಸೀಮೋನನ ಮಗನಾದ ಯೂದ
ಇಸ್ಕರಿಯೋತನು--
5 ಈ ತೈಲವನ್ನು ಯಾಕೆ ಮುನ್ನೂರು
ನಾಣ್ಯಗಳಿಗೆ ಮಾರಿ ಬಡವರಿಗೆ ಕೊಡಲಿಲ್ಲ
ಅಂದನು.
6 ಅವನು ಬಡವರಿಗೋಸ್ಕರ ಚಿಂತಿಸಿದ್ದಕ್ಕಾಗಿ
ಅಲ್ಲ , ಅವನು ಕಳ್ಳನಾಗಿದ್ದು ಹಣದ
ಚೀಲವನ್ನು ಇಟ್ಟು ಕೊಂಡು ಅದರಲ್ಲಿ

ಹಾಕಿದ್ದನ್ನು ತಕ್ಕೊಳ್ಳುವವನಾಗಿದ್ದ ದರಿಂದಲೇ
ಇದನ್ನು ಹೇಳಿದನು.
7 ಆಗ ಯೇಸು--ಈಕೆಯನ್ನು ಬಿಟ್ಟುಬಿಡಿರಿ;
ನನ್ನನ್ನು ಹೂಣಿಡುವ ದಿವಸಕ್ಕಾಗಿ ಈಕೆಯು
ಇದನ್ನು ಇಟ್ಟುಕೊಂಡಿದ್ದಾಳೆ.
8 ಯಾಕಂದರೆ ಬಡವರು ಯಾವಾಗಲೂ
ನಿಮ್ಮ ಬಳಿಯಲ್ಲಿ ಇರುತ್ತಾರೆ; ಆದರೆ ನಾನು
ಯಾವಾಗಲೂ ನಿಮ್ಮ ಬಳಿಯಲ್ಲಿ
ಇರುವದಿಲ್ಲ ಅಂದನು.
9 ಆದಕಾರಣ ಯೇಸು ಅಲ್ಲಿದ್ದಾನೆಂದು
ಯೆಹೂದ್ಯ ರಲ್ಲಿ ಬಹಳ ಜನರು ತಿಳಿದು
ಆತನನ್ನು ಮಾತ್ರವಲ್ಲದೆ ಆತನು
ಸತ್ತವರೊಳಗಿಂದ ಎಬ್ಬಿಸಿದ ಲಾಜರನನ್ನೂ

ನೋಡುವದಕ್ಕಾಗಿ ಬಂದರು.
10 ಆದರೆ ಪ್ರಧಾನ ಯಾಜಕರು
ಲಾಜರನನ್ನು ಸಹ ಕೊಲ್ಲಬೇಕೆಂದು
ಆಲೋಚನೆ ಮಾಡಿಕೊಂಡರು.
11 ಯಾಕಂದರೆ ಅವನ ನಿಮಿತ್ತ ಅನೇಕ
ಯೆಹೂದ್ಯರು ಹೋಗಿ ಯೇಸುವಿನಲ್ಲಿ
ನಂಬಿಕೆಯಿಟ್ಟರು.
12 ಮರುದಿನ ಹಬ್ಬಕ್ಕೆ ಬಂದ ಬಹಳ ಜನರು
ಯೇಸು ಯೆರೂಸಲೇಮಿಗೆ ಬರುತ್ತಾನೆಂದು
ಕೇಳಿದಾಗ
13 ಖರ್ಜೂರದ ಗರಿಗಳನ್ನು ತಕ್ಕೊಂಡು
ಆತನನ್ನು ಎದುರುಗೊಳ್ಳುವದಕ್ಕೆ ಹೊರಗೆ
ಬಂದು--ಹೊಸನ್ನ, ಕರ್ತನ ಹೆಸರಿನಲ್ಲಿ ಬರುವ

ಇಸ್ರಾಯೇಲಿನ ಅರಸನು ಆಶೀರ್ವದಿಸಲ್ಪಡಲಿ ಎಂದು ಕೂಗಿದರು.
14 ಯೇಸು ಪ್ರಾಯದ ಕತ್ತೆಯನ್ನು ಕಂಡುಕೊಂಡು ಅದರ ಮೇಲೆ ಕೂತುಕೊಂಡನು;
15 ಹೀಗೆ--ಚೀಯೋನ್‌ಕುಮಾ ರಿಯೇ, ಭಯಪಡಬೇಡ; ಇಗೋ, ನಿನ್ನ ಅರಸನು ಪ್ರಾಯದ ಕತ್ತೆಯ ಮೇಲೆ ಕೂತುಕೊಂಡು ಬರುತ್ತಾನೆ ಎಂದು ಬರೆದಿರುವ ಪ್ರಕಾರ ನೆರವೇರಿತು.
16 ಇವು ಗಳನ್ನು ಆತನ ಶಿಷ್ಯರು ಮೊದಲು ತಿಳಿದಿರಲಿಲ್ಲ; ಆದರೆ ಯೇಸು ಮಹಿಮೆ ಹೊಂದಿದಾಗ ಇವು ಆತನ ವಿಷಯವಾಗಿ

ಬರೆಯಲ್ಪಟ್ಟಿವೆಯೆಂದೂ ಇವುಗಳನ್ನು ಅವರು ಆತನಿಗೆ ಮಾಡಿದರೆಂದೂ ಜ್ಞಾಪಕಮಾಡಿ ಕೊಂಡರು.
17 ಇದಲ್ಲದೆ ಆತನು ಲಾಜರನನ್ನು ಸಮಾ ಧಿಯೊಳಗಿಂದ ಕರೆದು ಅವನನ್ನು ಸತ್ತವರೊಳಗಿಂದ ಎಬ್ಬಿಸಿದಾಗ ಆತನ ಸಂಗಡ ಇದ್ದ ಜನರು ಸಾಕ್ಷಿಕೊಟ್ಟರು.
18 ಆತನು ಈ ಅದ್ಭುತಕಾರ್ಯವನ್ನು ಮಾಡಿದನೆಂದು ಕೇಳಿದ ಜನರು ಸಹ ಆತನನ್ನು ಎದುರುಗೊಂಡರು.
19 ಆದದರಿಂದ ಫರಿಸಾಯರು ತಮ್ಮತಮ್ಮೊಳಗೆ--ನಿಮ್ಮ ಯತ್ನವೇನೂ ಸಾಗಲಿಲ್ಲವೆಂದು ನೀವು

ತಿಳಿಯುವದಿಲ್ಲವೋ? ಇಗೋ, ಲೋಕವು
ಆತನ ಹಿಂದೆ ಹೋಯಿತು ಎಂದು
ಅಂದುಕೊಂಡರು.
20 ಹಬ್ಬದಲ್ಲಿ ಆರಾಧಿಸುವದಕ್ಕೆ ಬಂದವರಲ್ಲಿ
ಕೆಲ ವರು ಗ್ರೀಕರಿದ್ದರು.
21 ಇವರು ಗಲಿಲಾಯ
ಬೇತ್ಸಾಯಿದವನಾದ ಫಿಲಿಪ್ಪನ ಬಳಿಗೆ
ಬಂದು--ಅಯ್ಯಾ ನಾವು ಯೇಸುವನ್ನು
ನೋಡಬೇಕೆಂದಿದ್ದೇವೆ ಅಂದರು.
22 ಫಿಲಿಪ್ಪನು ಬಂದು ಅಂದ್ರೆಯನಿಗೆ ಹೇಳಿ
ದನು; ಅಂದ್ರೆಯನೂ ಫಿಲಿಪ್ಪನೂ ತಿರಿಗಿ
ಯೇಸುವಿಗೆ ಹೇಳಿದರು.
23 ಯೇಸು ಪ್ರತ್ಯುತ್ತರವಾಗಿ ಅವರಿಗೆ--

ಮನುಷ್ಯಕುಮಾರನು ಮಹಿಮೆ ಹೊಂದುವ
ಗಳಿಗೆ ಬಂದದೆ.
24 ನಾನು ನಿಮಗೆ ನಿಜನಿಜವಾಗಿ ಹೇಳು
ತ್ತೇನೆ--ಗೋದಿಯ ಕಾಳು ಭೂಮಿಯಲ್ಲಿ
ಬಿದ್ದು ಸಾಯ ದಿದ್ದರೆ ಅದು ಒಂದೇ ಆಗಿ
ಉಳಿಯುವದು; ಅದು ಸತ್ತಮೇಲೆ ಬಹಳ
ಫಲಕೊಡುವದು.
25 ತನ್ನ ಪ್ರಾಣ ವನ್ನು ಪ್ರೀತಿಸುವವನು
ಅದನ್ನು ಕಳಕೊಳ್ಳುವನು; ಈ ಲೋಕದಲ್ಲಿ
ತನ್ನ ಪ್ರಾಣವನ್ನು ಹಗೆಮಾಡುವವನು
ನಿತ್ಯಜೀವಕ್ಕಾಗಿ ಅದನ್ನು ಕಾಪಾಡಿಕೊಳ್ಳುವನು.
26 ಯಾವನಾದರೂ ನನ್ನನ್ನು
ಸೇವಿಸುವವನಾದರೆ ಅವನು ನನ್ನನ್ನು

ಹಿಂಬಾಲಿಸಲಿ; ನಾನು ಇರುವಲ್ಲಿಯೇ ನನ್ನ
ಸೇವಕನೂ ಇರುವನು; ಯಾವನಾದರೂ
ನನ್ನನ್ನು ಸೇವಿಸುವವನಾದರೆ ನನ್ನ ತಂದೆಯು
ಅವನನ್ನು ಸನ್ಮಾನಿಸುವನು.
27 ಈಗ ನನ್ನ ಪ್ರಾಣವು ತತ್ತರಿಸುತ್ತದೆ. ನಾನು
ಏನು ಹೇಳಲಿ? ತಂದೆಯೇ, ಈ
ಗಳಿಗೆಯಿಂದ ನನ್ನನ್ನು ತಪ್ಪಿಸು; ಆದರೆ
ಇದಕ್ಕಾಗಿಯೇ ನಾನು ಈ ಗಳಿಗೆಗೆ ಬಂದೆನು.
28 ತಂದೆಯೇ, ನಿನ್ನ ಹೆಸರನ್ನು
ಮಹಿಮೆಪಡಿಸಿಕೋ ಅಂದನು. ಆಗ--ನಾನು
ಮಹಿ ಮೆಪಡಿಸಿದ್ದೇನೆ, ತಿರಿಗಿ ಅದನ್ನು
ಮಹಿಮೆಪಡಿಸುವೆನು ಎಂದು ಹೇಳುವ
ಧ್ವನಿಯು ಪರಲೋಕದಿಂದ ಬಂತು.

29 ಆಗ ಅಲ್ಲಿ ನಿಂತಿದ್ದ ಜನರು ಅದನ್ನು
ಕೇಳಿ--ಗುಡುಗಿತು ಅಂದರು.
ಬೇರೆಯವರು--ದೂತ ನೊಬ್ಬನು ಈತನ
ಸಂಗಡ ಮಾತನಾಡಿದನು ಅಂದರು.
30 ಯೇಸು ಪ್ರತ್ಯುತ್ತರವಾಗಿ--ಈ ಧ್ವನಿಯು
ನನಗೋ ಸ್ಕರವಲ್ಲ, ನಿಮಗೋಸ್ಕರವೇ
ಬಂದಿದೆ.
31 ಈಗ ಈ ಲೋಕಕ್ಕೆ ನ್ಯಾಯತೀರ್ಪು
ಆಗುತ್ತದೆ; ಇಹಲೋಕದ ಅಧಿಪತಿಯು ಈಗ
ಹೊರಗೆ ಹಾಕಲ್ಪಡುವನು.
32 ನಾನು ಭೂಮಿಯಿಂದ ಮೇಲಕ್ಕೆ
ಎತ್ತಲ್ಪಟ್ಟರೆ ಎಲ್ಲ ರನ್ನೂ ನನ್ನ ಬಳಿಗೆ
ಎಳಕೊಳ್ಳುವೆನು ಅಂದನು.

33 ತಾನು ಎಂಥಾ ಮರಣದಿಂದ
ಸಾಯಬೇಕಾಗಿತ್ತೆಂದು ಸೂಚಿಸಿ ಇದನ್ನು
ಹೇಳಿದನು.
34 ಜನರು ಆತ ನಿಗೆ--ಕ್ರಿಸ್ತನು ಸದಾಕಾಲವೂ
ಇರುತ್ತಾನೆಂದು ನಾವು ನ್ಯಾಯಪ್ರಮಾಣದಲ್ಲಿ
ಕೇಳಿದ್ದೇವೆ; ಹಾಗಾದರೆ ಮನುಷ್ಯಕುಮಾರನು
ಎತ್ತಲ್ಪಡಬೇಕೆಂದು ನೀನು ಹೇಳುವದು
ಹೇಗೆ? ಈ ಮನುಷ್ಯಕುಮಾರನು ಯಾರು
ಎಂದು ಕೇಳಿದರು.
35 ಆಗ ಯೇಸು ಅವ ರಿಗೆ--ಇನ್ನು
ಸ್ವಲ್ಪಕಾಲವೇ ಬೆಳಕು ನಿಮ್ಮೊಂದಿಗೆ ಇರು ತ್ತದೆ.
ಕತ್ತಲೆ ನಿಮ್ಮನ್ನು ಮುಸುಕಿಕೊಳ್ಳದಂತೆ ನಿಮಗೆ
ಬೆಳಕಿರುವಾಗಲೇ ನಡೆಯಿರಿ; ಯಾಕಂದರೆ

ಕತ್ತಲೆಯಲ್ಲಿ ನಡೆಯುವವನು ತಾನು ಎಲ್ಲಿಗೆ
ಹೋಗುತ್ತಾನೆಂದು ತಿಳಿಯನು.
36 ನೀವು ಬೆಳಕಿನ ಮಕ್ಕಳಾಗುವಂತೆ ನಿಮಗೆ
ಬೆಳಕು ಇರುವಾಗಲೇ ಬೆಳಕನ್ನು ನಂಬಿರಿ
ಅಂದನು. ಯೇಸು ಇವುಗಳನ್ನು ಹೇಳಿದ
ಮೇಲೆ ಹೊರಟುಹೋಗಿ ಅವರಿಂದ
ಅಡಗಿಕೊಂಡನು.
37 ಆದರೆ ಆತನು ಅನೇಕ
ಅದ್ಭುತಕಾರ್ಯಗಳನ್ನು ಅವರ ಮುಂದೆ
ಮಾಡಿದಾಗ್ಯೂ ಅವರು ಆತನನ್ನು ನಂಬಲಿಲ್ಲ.
38 ಇದರಿಂದ--ಕರ್ತನೇ, ನಮ್ಮ ವರ್ತ
ಮಾನವನ್ನು ಯಾರು ನಂಬಿದ್ದಾರೆ? ಕರ್ತನ
ಬಾಹುವು ಯಾರಿಗೆ ಪ್ರಕಟವಾಯಿತು ಎಂದು

ಪ್ರವಾದಿಯಾದ ಯೆಶಾಯನು ನುಡಿದದ್ದು ನೆರವೇರುವ ಹಾಗೆ ಇದಾಯಿತು.
39 ಅವರು ನಂಬಲಾರದೆ ಇದ್ದದರಿಂದ ಯೆಶಾಯನು ತಿರಿಗಿ ಹೇಳಿದ್ದೇನಂದರೆ--
40 ಅವರು ಕಣ್ಣಿನಿಂದ ಕಾಣದೆ ಹೃದಯದಿಂದ ಗ್ರಹಿಸದೆ ಮತ್ತು ತಿರುಗಿಕೊಂಡು ನನ್ನಿಂದ ಸ್ವಸ್ಥತೆಯನ್ನು ಹೊಂದದೆ ಇರುವಂತೆ ಆತನು ಅವರ ಕಣ್ಣುಗಳನ್ನು ಕುರುಡು ಮಾಡಿ ಅವರ ಹೃದಯವನ್ನು ಕಠಿಣ ಮಾಡಿದನು ಎಂಬದು.
41 ಯೆಶಾಯನು ಆತನ ಮಹಿಮೆಯನ್ನು ನೋಡಿದ್ದರಿಂದ ಆತನ ವಿಷಯವಾಗಿ ಇವುಗಳನ್ನು ಹೇಳಿದನು.

42 ಆದಾಗ್ಯೂ ಮುಖ್ಯಾಧಿಕಾರಿಗಳಲ್ಲಿ ಅನೇಕರು ಆತನ ಮೇಲೆ ನಂಬಿಕೆಯಿಟ್ಟರು. ಆದರೆ ಫರಿಸಾಯರ ನಿಮಿತ್ತ ತಾವು ಸಭಾಮಂದಿರದಿಂದ ಬಹಿಷ್ಕರಿಸಲ್ಪಡಬಾರದೆಂದು ಅವರು ಆತನನ್ನು ಒಪ್ಪಿಕೊಳ್ಳಲಿಲ್ಲ.
43 ಯಾಕಂದರೆ ಅವರು ದೇವರ ಹೊಗಳಿಕೆಗಿಂತ ಮನುಷ್ಯರ ಹೊಗಳಿಕೆಯನ್ನೇ ಹೆಚ್ಚಾಗಿ ಪ್ರೀತಿಸಿದರು.
44 ಆಗ ಯೇಸು--ನನ್ನನ್ನು ನಂಬುವವನು ನನ್ನನ್ನಲ್ಲ. ನನ್ನನ್ನು ಕಳುಹಿಸಿಕೊಟ್ಟಾತನನ್ನೇ ನಂಬಿದ್ದಾನೆ.
45 ನನ್ನನ್ನು ನೋಡುವವನು ನನ್ನನ್ನು

ಕಳುಹಿಸಿಕೊಟ್ಟಾತನನ್ನೇ ನೋಡುತ್ತಾನೆ.
46 ನನ್ನಲ್ಲಿ ನಂಬಿಕೆಯಿಟ್ಟ ಯಾವನೂ ಕತ್ತಲೆಯಲ್ಲಿ ಇರಬಾರದೆಂದು ನಾನು ಬೆಳಕಾಗಿ ಲೋಕಕ್ಕೆ ಬಂದಿದ್ದೇನೆ.
47 ಯಾವನಾದರೂ ನನ್ನ ಮಾತುಗಳನ್ನು ಕೇಳಿ ನಂಬದೆಹೋದರೆ ನಾನು ಅವ ನಿಗೆ ತೀರ್ಪು ಮಾಡುವದಿಲ್ಲ; ಲೋಕಕ್ಕೆ ತೀರ್ಪು ಮಾಡುವದಕ್ಕಾಗಿ ಅಲ್ಲ, ಲೋಕವನ್ನು ರಕ್ಷಿಸುವದ ಕ್ಕಾಗಿಯೇ ನಾನು ಬಂದೆನು.
48 ನನ್ನನ್ನು ತಿರಸ್ಕರಿಸಿ ನನ್ನ ಮಾತುಗಳನ್ನು ಅಂಗೀಕರಿಸದಿರುವವನಿಗೆ ತೀರ್ಪು ಮಾಡುವಂಥದು ಒಂದು ಇದೆ; ಅದು ನಾನು ಹೇಳಿದ ಮಾತೇ; ಅದು ಕಡೇ ದಿನದಲ್ಲಿ

ಅವನಿಗೆ ತೀರ್ಪು ಮಾಡುವದು.
49 ನನ್ನಷ್ಟಕ್ಕೆ ನಾನೇ ಮಾತನಾಡಲಿಲ್ಲ; ಆದರೆ ನಾನು ಏನು ಹೇಳಬೇಕು ಮತ್ತು ನಾನು ಏನು ಮಾತನಾಡಬೇಕೆಂಬದನ್ನು ನನ್ನನ್ನು ಕಳುಹಿಸಿದ ತಂದೆಯೇ ನನಗೆ ಆಜ್ಞಾಪಿಸಿದ್ದಾನೆ.
50 ಆತನ ಆಜ್ಞೆಯು ನಿತ್ಯಜೀವವಾಗಿದೆ ಎಂದು ನಾನು ಬಲ್ಲೆನು; ಆದದರಿಂದ ನಾನು ಮಾತನಾಡುವವುಗಳನ್ನು ತಂದೆಯು ನನಗೆ ಹೇಳಿದಂತೆಯೇ ನಾನು ಮಾತನಾಡು ತ್ತೇನೆ ಎಂದು ಹೇಳಿದನು.

## ಅಧ್ಯಾಯ 13

1 ಆಗ ಪಸ್ಕ ಹಬ್ಬದ ಮುಂಚೆ ಯೇಸು ತಾನು
ಈ ಲೋಕದೊಳಗಿಂದ ತಂದೆಯ ಬಳಿಗೆ
ಹೋಗಬೇಕಾದ ತನ್ನ ಗಳಿಗೆಯು ಬಂತೆಂದು
ತಿಳಿದು ಈ ಲೋಕದಲ್ಲಿದ್ದ ತನ್ನ ಸ್ವಂತದವರನ್ನು
ಪ್ರೀತಿಸಿ ಅವರನ್ನು ಅಂತ್ಯದವರೆಗೆ ಪ್ರೀತಿಸಿದನು.
2 ಊಟವಾದ ಮೇಲೆ ಆತನನ್ನು
ಹಿಡುಕೊಡಬೇಕೆಂಬದನ್ನು ಸೀಮೋನನ
ಮಗನಾದ ಯೂದ ಇಸ್ಕರಿಯೋತನ
ಹೃದಯದಲ್ಲಿ ಸೈತಾನನು ಆಲೋಚನೆ
ಹುಟ್ಟಿಸಿದನು.
3 ತಂದೆಯು ತನ್ನ ಕೈಯಲ್ಲಿ ಎಲ್ಲವನ್ನೂ
ಕೊಟ್ಟಿದ್ದಾನೆಂತಲೂ ತಾನು ದೇವರ
ಬಳಿಯಿಂದ ಹೊರಟು ಬಂದಿದ್ದು ತಿರಿಗಿ

ದೇವರ ಬಳಿಗೆ ಹೋಗುತ್ತೇನೆಂತಲೂ
ಯೇಸು ತಿಳಿದು ಕೊಂಡು
4 ಊಟದಿಂದೆದ್ದು ತನ್ನ ಉಡುಪುಗಳನ್ನು
ತೆಗೆದಿಟ್ಟು ಕೈ ಪಾವಡವನ್ನು ತಕ್ಕೊಂಡು
ನಡುವನ್ನು ಕಟ್ಟಿಕೊಂಡನು.
5 ತರುವಾಯ ಆತನು ಬೋಗುಣಿ ಯಲ್ಲಿ
ನೀರು ಹಾಕಿಕೊಂಡು ಶಿಷ್ಯರ ಕಾಲುಗಳನ್ನು
ತೊಳೆಯುವದಕ್ಕೂ ತಾನು ನಡುವಿಗೆ
ಕಟ್ಟಿಕೊಂಡ ಕೈ ಪಾವಡದಿಂದ ಅವುಗಳನ್ನು
ಒರಸುವದಕ್ಕೂ ಪ್ರಾರಂಭಿಸಿದನು.
6 ಆತನು ಸೀಮೋನ ಪೇತ್ರನ ಬಳಿಗೆ
ಬಂದಾಗ ಅವನು ಆತನಿಗೆ--ಕರ್ತನೇ, ನೀನು
ನನ್ನ ಕಾಲುಗಳನ್ನು ತೊಳೆಯುತ್ತೀಯೋ

ಎಂದು ಕೇಳಿ ದನು.
7 ಯೇಸು ಪ್ರತ್ಯುತ್ತರವಾಗಿ ಅವನಿಗೆ--ನಾನು
ಮಾಡುವದು ಏನೆಂದು ಈಗ ನಿನಗೆ
ತಿಳಿಯುವದಿಲ್ಲ; ಆದರೆ ಇನ್ನು ಮೇಲೆ ನಿನಗೆ
ತಿಳಿಯುವದು ಅಂದನು.
8 ಪೇತ್ರನು ಆತನಿಗೆ--ನೀನು ನನ್ನ
ಕಾಲುಗಳನ್ನು ಎಂದಿಗೂ ತೊಳೆಯಬಾರದು
ಅಂದನು; ಯೇಸು ಪ್ರತ್ಯುತ್ತರವಾಗಿ ಅವನಿಗೆ--
ನಾನು ನಿನ್ನನ್ನು ತೊಳೆಯ ದಿದ್ದರೆ ನನ್ನೊಂದಿಗೆ
ನಿನಗೆ ಪಾಲಿಲ್ಲ ಎಂದು ಹೇಳಿದನು.
9 ಅದಕ್ಕೆ ಸೀಮೋನ ಪೇತ್ರನು ಆತ ನಿಗೆ--
ಕರ್ತನೇ, ನನ್ನ ಪಾದಗಳನ್ನು ಮಾತ್ರವಲ್ಲದೆ
ನನ್ನ ಕೈಗಳನ್ನು ಮತ್ತು ತಲೆಯನ್ನು ಸಹ ತೊಳೆ

ಅಂದನು.
10 ಯೇಸು ಅವನಿಗೆ--
ಸ್ನಾನಮಾಡಿಕೊಂಡವನು ತನ ಪಾದಗಳನ್ನು
ಹೊರತು ಮತ್ತೇನೂ ತೊಳೆಯುವದು
ಅವಶ್ಯವಿಲ್ಲ; ಯಾಕಂದರೆ ಅವನು
ಸಂಪೂರ್ಣವಾಗಿ ಶುದ್ಧನಾಗಿದ್ದಾನೆ. ನೀವು
ಶುದ್ಧರಾಗಿದ್ದೀರಿ, ಆದರೆ ಎಲ್ಲರೂ ಅಲ್ಲ
ಅಂದನು.
11 ತನ್ನನ್ನು ಹಿಡಿದುಕೊಡುವ ವನು
ಯಾರೆಂದು ಆತನು ತಿಳಿದಿದ್ದರಿಂದ--ನಿಮ್ಮಲ್ಲಿ
ಎಲ್ಲರೂ ಶುದ್ಧರಲ್ಲ ಎಂದು ಹೇಳಿದನು.
12 ಆತನು ಅವರ ಪಾದಗಳನ್ನು ತೊಳೆದ
ಮೇಲೆ ತನ್ನ ಉಡುಪುಗಳನ್ನು ಹಾಕಿಕೊಂಡು

ತಿರಿಗಿ ಕೂತು ಕೊಂಡ ಮೇಲೆ ಅವರಿಗೆ--
ನಾನು ನಿಮಗೆ ಮಾಡಿದ್ದು ಏನೆಂದು
ತಿಳಿಯಿತೋ?
13 ನೀವು ನನ್ನನ್ನು ಬೋಧ ಕನು ಮತ್ತು
ಕರ್ತನು ಎಂದು ಕರೆಯುತ್ತೀರಿ; ನೀವು
ಹೇಳುವದು ಸರಿ; ಯಾಕಂದರೆ ನಾನು
ಅಂಥವನೇ ಹೌದು.
14 ಹಾಗಾದರೆ ನಿಮ್ಮ ಕರ್ತನೂ
ಬೋಧಕನೂ ಆಗಿರುವ ನಾನು ನಿಮ್ಮ
ಕಾಲುಗಳನ್ನು ತೊಳೆದರೆ ನೀವು ಸಹ ಒಬ್ಬರ
ಕಾಲುಗಳನ್ನೊಬ್ಬರು ತೊಳೆಯತಕ್ಕದ್ದು.
15 ನಾನು ನಿಮಗೆ ಮಾಡಿದಂತೆಯೇ ನೀವು
ಸಹ ಮಾಡಬೇಕೆಂದು ನಾನು ನಿಮಗೆ

ಮಾದರಿಯನ್ನು ತೋರಿಸಿದ್ದೇನೆ.
16 ನಾನು ನಿಮಗೆ ನಿಜನಿಜವಾಗಿ ಹೇಳುತ್ತೇನೆ--ತನ್ನ ಒಡೆಯನಿಗಿಂತ ಸೇವಕನು ದೊಡ್ಡವನಲ್ಲ; ಇಲ್ಲವೆ ಕಳುಹಿಸಲ್ಪಟ್ಟವನು ಅವನನ್ನು ಕಳುಹಿಸಿದವನಿಗಿಂತ ದೊಡ್ಡವನಲ್ಲ.
17 ನೀವು ಇವು ಗಳನ್ನು ತಿಳುಕೊಂಡು ಇದರಂತೆ ಮಾಡಿದರೆ ನೀವು ಧನ್ಯರು.
18 ನಾನು ನಿಮ್ಮೆಲ್ಲರ ವಿಷಯದಲ್ಲಿ ಮಾತ ನಾಡುವದಿಲ್ಲ; ನಾನು ಆರಿಸಿಕೊಂಡವರನ್ನು ಬಲ್ಲೆನು; ಆದರೆ--ನನ್ನೊಂದಿಗೆ ರೊಟ್ಟಿಯನ್ನು ತಿನ್ನುವವನು ನನಗೆ ವಿರೋಧವಾಗಿ ತನ್ನ ಹಿಮ್ಮಡಿಯನ್ನು ಎತ್ತಿದ್ದಾನೆ ಎಂಬ ಬರಹವು ನೆರವೇರಬೇಕಾಗಿದೆ.

19 ಅದು ಆಗುವಾಗ ನಾನೇ ಆತನೆಂದು
ನೀವು ನಂಬುವಂತೆ ಅದು
ಸಂಭವಿಸುವದಕ್ಕಿಂತ ಮುಂಚೆ ಈಗಲೇ
ನಿಮಗೆ ಹೇಳುತ್ತೇನೆ.
20 ನಾನು ನಿಮಗೆ ನಿಜ ನಿಜವಾಗಿ
ಹೇಳುತ್ತೇನೆ--ನಾನು ಕಳುಹಿಸಿದವನನ್ನು
ಅಂಗೀಕರಿಸು ವವನು ನನ್ನನ್ನು
ಅಂಗೀಕರಿಸುತ್ತಾನೆ; ನನ್ನನ್ನು ಅಂಗೀಕರಿ
ಸುವವನು ನನ್ನನ್ನು ಕಳುಹಿಸಿದಾತನನ್ನೇ
ಅಂಗೀಕರಿ ಸುತ್ತಾನೆ.
21 ಯೇಸು ಹೀಗೆ ಹೇಳಿದ ಮೇಲೆ ಆತ್ಮದಲ್ಲಿ
ಕಳವಳ ಗೊಂಡು ಸಾಕ್ಷೀಕರಿಸಿ--ನಾನು
ನಿಮಗೆ ನಿಜನಿಜವಾಗಿ ಹೇಳುತ್ತೇನೆ. ನಿಮ್ಮಲ್ಲಿ

ಒಬ್ಬನು ನನ್ನನ್ನು ಹಿಡಿದು ಕೊಡುವವನು ಎಂದು ಹೇಳಿದನು.
22 ಆಗ ಶಿಷ್ಯರು ಅನುಮಾನದಿಂದ ಈತನು ಯಾರನ್ನು ಕುರಿತು ಹೇಳಿದನೆಂದು ಒಬ್ಬರನೊಬ್ಬರು ನೋಡಿದರು.
23 ಶಿಷ್ಯ ರಲ್ಲಿ ಯೇಸು ಪ್ರೀತಿಸಿದ ಒಬ್ಬನು ಆತನ ಎದೆಯ ಮೇಲೆ ಒರಗಿಕೊಂಡಿದ್ದನು.
24 ಆದದರಿಂದ ಸೀಮೋನ ಪೇತ್ರನು ಅವನಿಗೆ ಸನ್ನೆ ಮಾಡಿ ಆತನು ಯಾರ ವಿಷಯವಾಗಿ ಮಾತನಾಡಿದನೆಂದು ಕೇಳಿದನು.
25 ತರುವಾಯ ಅವನು ಯೇಸುವಿನ ಎದೆಯಮೇಲೆ ಒರಗಿಕೊಂಡು--ಕರ್ತನೇ,

ಅವನು ಯಾರು ಎಂದು ಆತನನ್ನು
ಕೇಳಿದನು.
26 ಅದಕ್ಕೆ ಯೇಸು--ನಾನು ರೊಟ್ಟಿಯ
ತುಂಡನ್ನು ಅದ್ದಿ ಯಾವನಿಗೆ ಕೊಡುತ್ತೇನೋ
ಅವನೇ ಎಂದು ಉತ್ತರ ಕೊಟ್ಟನು. ಆ
ರೊಟ್ಟಿಯ ತುಂಡನ್ನು ಅದ್ದಿ ಆತನು
ಸೀಮೋನನ ಮಗನಾದ ಯೂದ
ಇಸ್ಕರಿಯೋತನಿಗೆ ಕೊಟ್ಟನು.
27 ರೊಟ್ಟಿಯ ತುಂಡನ್ನು ತಕ್ಕೊಂಡ ಮೇಲೆ
ಸೈತಾನನು ಅವನೊಳಗೆ ಹೊಕ್ಕನು. ಆಗ
ಯೇಸು ಅವನಿಗೆ--ನೀನು ಮಾಡುವ ದನ್ನು
ಬೇಗನೆ ಮಾಡು ಎಂದು ಹೇಳಿದನು.
28 ಆತನು ಯೂದನಿಗೆ ಇದನ್ನು ಹೇಳಿದ

ಉದ್ದೇಶವೇನೆಂದು ಊಟಕ್ಕೆ ಕೂತವರಲ್ಲಿ ಯಾರಿಗೂ ಗೊತ್ತಾಗಲಿಲ್ಲ.
29 ಯೂದನು ಹಣದ ಚೀಲವನ್ನು ಇಟ್ಟುಕೊಂಡ ದ್ದರಿಂದ ಯೇಸು ಅವನಿಗೆ--ಹಬ್ಬಕ್ಕೆ ನಮಗೆ ಬೇಕಾದವು ಗಳನ್ನು ಕೊಂಡುಕೋ ಎಂತಲೋ ಇಲ್ಲವೆ ಬಡವರಿಗೆ ಏನಾದರೂ ಕೊಡು ಎಂತಲೋ ಅವನಿಗೆ ಆತನು ಹೇಳಿದನೆಂದು ಅವರಲ್ಲಿ ಕೆಲವರು ನೆನಸಿದರು.
30 ಯೂದನು ಆ ರೊಟ್ಟಿಯ ತುಂಡನ್ನು ತೆಗೆದುಕೊಂಡ ಕೂಡಲೇ ಹೊರಗೆ ಹೋದನು; ಆಗ ರಾತ್ರಿಯಾಗಿತ್ತು.
31 ಅವನು ಹೊರಗೆ ಹೋದಮೇಲೆ

ಯೇಸು-- ಈಗ ಮನುಷ್ಯಕುಮಾರನು
ಮಹಿಮೆಪಟ್ಟಿದ್ದಾನೆ. ದೇವರು ಆತನಲ್ಲಿ
ಮಹಿಮೆಪಟ್ಟಿದ್ದಾನೆ.
32 ದೇವರು ಆತನಲ್ಲಿ ಮಹಿಮೆಪಟ್ಟಿರಲಾಗಿ
ದೇವರು ಸಹ ಆತನನ್ನು ತನ್ನಲ್ಲಿಯೇ
ಮಹಿಮೆಪಡಿಸುವನು; ಕೂಡಲೆ ಆತನನ್ನು
ಮಹಿಮೆಪಡಿಸುವನು.
33 ಚಿಕ್ಕಮಕ್ಕಳೇ, ಇನ್ನು ಸ್ವಲ್ಪ ಕಾಲವೇ ನಾನು
ನಿಮ್ಮ ಸಂಗಡ ಇರುತ್ತೇನೆ, ನೀವು ನನ್ನನ್ನು
ಹುಡುಕುವಿರಿ; ನಾನು ಹೋಗುವಲ್ಲಿಗೆ ನೀವು
ಬರಲಾರಿರೆಂದು ನಾನು ಯೆಹೂದ್ಯರಿಗೆ
ಹೇಳಿದಂತೆಯೇ ನಿಮಗೂ ಈಗ ಹೇಳುತ್ತೇನೆ.
34 ಒಬ್ಬರನ್ನೊಬ್ಬರು ಪ್ರೀತಿಸಬೇಕೆಂಬ ಒಂದು

ಹೊಸ ಆಜ್ಞೆಯನ್ನು ನಾನು ನಿಮಗೆ
ಕೊಡುತ್ತೇನೆ--ನಾನು ನಿಮ್ಮನ್ನು ಪ್ರೀತಿಸಿದ
ಹಾಗೆಯೇ ನೀವೂ ಒಬ್ಬರನ್ನೊಬ್ಬರು
ಪ್ರೀತಿಸಬೇಕು.
35 ಒಬ್ಬರ ಮೇಲೊಬ್ಬರಿಗೆ ಪ್ರೀತಿಯಿದ್ದರೆ
ಇದರಿಂದ ಎಲ್ಲರೂ ನಿಮ್ಮನ್ನು ನನ್ನ ಶಿಷ್ಯರೆಂದು
ತಿಳಿದುಕೊಳ್ಳು ವರು ಎಂದು ಹೇಳಿದನು.
36 ಸೀಮೋನ ಪೇತ್ರನು ಆತನಿಗೆ--ಕರ್ತನೇ,
ನೀನು ಎಲ್ಲಿಗೆ ಹೋಗುತ್ತೀ? ಅನ್ನಲು
ಯೇಸು ಪ್ರತ್ಯುತ್ತರವಾಗಿ ಅವನಿಗೆ--ನಾನು
ಹೋಗುವಲ್ಲಿಗೆ ನೀನು ಈಗ ಬರಲಾರಿ;
ತರುವಾಯ ನೀನು ನನ್ನನ್ನು ಹಿಂಬಾಲಿಸುವಿ
ಅಂದನು.

37 ಪೇತ್ರನು ಆತನಿಗೆ-- ಕರ್ತನೇ, ನಾನು
ಯಾಕೆ ಈಗ ನಿನ್ನ ಹಿಂದೆ ಬರ ಲಾರೆನು?
ನಿನಗೋಸ್ಕರ ನನ್ನ ಪ್ರಾಣವನ್ನು ಕೊಡು ವೆನು
ಅಂದನು.
38 ಯೇಸು ಪ್ರತ್ಯುತ್ತರವಾಗಿ ಅವ ನಿಗೆ--
ನೀನು ನನಗೋಸ್ಕರ ನಿನ್ನ ಪ್ರಾಣವನ್ನು
ಕೊಡು ತ್ತೀಯೋ? ನಾನು ನಿನಗೆ
ನಿಜನಿಜವಾಗಿ ಹೇಳುತ್ತೇನೆ, ನೀನು ನನ್ನನ್ನು
ಮೂರು ಸಾರಿ ಅಲ್ಲಗಳೆಯುವ ತನಕ
ಹುಂಜವು ಕೂಗುವದಿಲ್ಲ ಅಂದನು.

ಅಧ್ಯಾಯ **14**

1 ನಿಮ್ಮ ಹೃದಯುವು ಕಳವಳಗೊಳ್ಳದೆ ಇರಲಿ;

ನೀವು ದೇವರನ್ನು ನಂಬಿರಿ, ನನ್ನನ್ನೂ ನಂಬಿರಿ.
2 ನನ್ನ ತಂದೆಯ ಮನೆಯಲ್ಲಿ ಬಹಳ ಭವನ ಗಳಿವೆ; ಇಲ್ಲದಿದ್ದರೆ ನಾನು ನಿಮಗೆ ಹೇಳುತ್ತಿದ್ದೆನು, ನಾನು ನಿಮಗೆ ಸ್ಥಳವನ್ನು ಸಿದ್ಧಮಾಡುವದಕ್ಕೆ ಹೋಗು ತ್ತೇನಲ್ಲಾ.
3 ನಾನು ಹೋಗಿ ನಿಮಗೋಸ್ಕರ ಸ್ಥಳವನ್ನು ಸಿದ್ಧಮಾಡಿ ತಿರಿಗಿ ಬಂದು ನಿಮ್ಮನ್ನು ನನ್ನ ಬಳಿಗೆ ಸೇರಿಸಿಕೊಳ್ಳುವೆನು; ಆಗ ನಾನಿರುವಲ್ಲಿ ನೀವು ಸಹ ಇರುವಿರಿ.
4 ನಾನು ಎಲ್ಲಿಗೆ ಹೋಗುತ್ತೇನೆಂಬದು ನಿಮಗೆ ತಿಳಿದದೆ; ಮಾರ್ಗವೂ ನಿಮಗೆ ಗೊತ್ತಿದೆ ಅಂದನು.

5 ತೋಮನು ಆತನಿಗೆ--ಕರ್ತನೇ, ನೀನು
ಎಲ್ಲಿಗೆ ಹೋಗುತ್ತೀಯೋ ನಮಗೆ
ತಿಳಿಯದು; ನಮಗೆ ಮಾರ್ಗವು ಹೇಗೆ
ಗೊತ್ತಾದೀತು ಅಂದನು.
6 ಯೇಸು ಅವನಿಗೆ--ನಾನೇ ಮಾರ್ಗವೂ
ಸತ್ಯವೂ ಜೀವವೂ ಆಗಿದ್ದೇನೆ; ನನ್ನ
ಮೂಲಕವಾಗಿ ಹೊರತು ಯಾರೂ
ತಂದೆಯ ಬಳಿಗೆ ಬರುವದಿಲ್ಲ.
7 ನೀವು ನನ್ನನ್ನು ತಿಳಿದಿದ್ದರೆ ನನ್ನ
ತಂದೆಯನ್ನು ಸಹ ತಿಳಿದವರಾಗಿ ರುತ್ತಿದ್ದಿರಿ;
ಈಗಿನಿಂದ ನೀವು ಆತನನ್ನು ತಿಳಿದಿದ್ದೀರಿ;
ಆತನನ್ನು ನೋಡಿದವರಾಗಿದ್ದೀರಿ ಎಂದು
ಹೇಳಿದನು.

8 ಫಿಲಿಪ್ಪನು ಆತನಿಗೆ--ಕರ್ತನೇ, ತಂದೆಯನ್ನು
ನಮಗೆ ತೋರಿಸು, ನಮಗೆ ಅಷ್ಟೇ ಸಾಕು
ಅಂದನು.
9 ಯೇಸು ಅವನಿಗೆ--ಫಿಲಿಪ್ಪನೇ, ನಾನು
ನಿಮ್ಮ ಸಂಗಡ ಇಷ್ಟು ಕಾಲ ಇದ್ದರೂ ನೀನು
ನನ್ನನ್ನು ತಿಳಿಯಲಿಲ್ಲವೋ? ನನ್ನನ್ನು
ನೋಡಿದವನು ತಂದೆಯನ್ನು ನೋಡಿದ್ದಾನೆ;
ಹಾಗಾದರೆ ತಂದೆಯನ್ನು ನಮಗೆ ತೋರಿಸು
ಎಂದು ನೀನು ಹೇಳುವದು ಹೇಗೆ?
10 ನಾನು ತಂದೆಯಲ್ಲಿ ಇದ್ದೇನೆ ಮತ್ತು
ತಂದೆಯು ನನ್ನಲ್ಲಿ ಇದ್ದಾನೆ ಎಂದು ನೀನು
ನಂಬುವದಿಲ್ಲವೋ? ನಾನು ನಿಮಗೆ
ಹೇಳುವ ಮಾತುಗಳನ್ನು ನನ್ನಷ್ಟಕ್ಕೆ ನಾನೇ

ಮಾತನಾಡುವದಿಲ್ಲ; ಆದರೆ ನನ್ನಲ್ಲಿ ವಾಸಿಸುತ್ತಿರುವ ತಂದೆಯೇ ಆ ಕಾರ್ಯಗಳನ್ನು ಮಾಡುತ್ತಾನೆ.
11 ನಾನು ತಂದೆ ಯಲ್ಲಿದ್ದೇನೆಂತಲೂ ತಂದೆಯು ನನ್ನಲ್ಲಿದ್ದಾನೆಂತಲೂ ನನ್ನನ್ನು ನಂಬಿರಿ. ಇಲ್ಲದಿದ್ದರೆ ಆ ಕ್ರಿಯೆಗಳ ನಿಮಿತ್ತವಾದರೂ ನನ್ನನ್ನು ನಂಬಿರಿ.
12 ನಾನು ನಿಮಗೆ ನಿಜನಿಜವಾಗಿ ಹೇಳುತ್ತೇನೆ--ನನ್ನನ್ನು ನಂಬುವವನು ನಾನು ಮಾಡುವ ಕ್ರಿಯೆ ಗಳನ್ನು ಸಹ ಮಾಡುವನು; ಇವುಗಳಿಗಿಂತ ಮಹತ್ತಾದ ಕ್ರಿಯೆಗಳನ್ನು ಅವನು ಮಾಡುವನು; ಯಾಕಂದರೆ ನಾನು ನನ್ನ ತಂದೆಯ ಬಳಿಗೆ ಹೋಗುತ್ತೇನೆ.

13 ನನ್ನ ಹೆಸರಿನಲ್ಲಿ ನೀವು ಏನೇನು
ಬೇಡಿಕೊಳ್ಳುವಿರೋ ಅದನ್ನು ನಾನು
ಮಾಡುವೆನು. ಹೀಗೆ ಮಗನಲ್ಲಿ ತಂದೆಯು
ಮಹಿಮೆ ಹೊಂದುವನು.
14 ನೀವು ನನ್ನ ಹೆಸರಿನಲ್ಲಿ ಏನಾದರೂ
ಕೇಳಿಕೊಂಡರೆ ನಾನು ಅದನ್ನು ಮಾಡುವೆನು.
15 ನೀವು ನನ್ನನ್ನು ಪ್ರೀತಿಸುವದಾದರೆ ನನ್ನ
ಆಜ್ಞೆ ಗಳನ್ನು ಕೈಕೊಳ್ಳಿರಿ.
16 ನಾನು ತಂದೆಯನ್ನು ಬೇಡಿ ಕೊಳ್ಳುವೆನು;
ಆಗ ಆತನು ನಿಮಗೆ ಬೇರೊಬ್ಬ ಆದರಿ
ಕನನ್ನು ಸದಾಕಾಲವೂ ನಿಮ್ಮ ಸಂಗಡ
ಇರುವದಕ್ಕೆ ಕೊಡುವನು.
17 ಆತನು ಸತ್ಯದ ಆತ್ಮನೇ; ಲೋಕವು

ಆತನನ್ನು ನೋಡದೆಯೂ ತಿಳಿಯದೆಯೂ
ಇರುವದ ರಿಂದ ಆತನನ್ನು ಹೊಂದಲಾರದು.
ಆದರೆ ನೀವು ಆತನನ್ನು ಬಲ್ಲಿರಿ. ಯಾಕಂದರೆ
ಆತನು ನಿಮ್ಮೊಂದಿಗೆ ವಾಸಿಸುತ್ತಾನೆ ಮತ್ತು
ನಿಮ್ಮೊಳಗಿರುವನು.
18 ನಾನು ನಿಮ್ಮನ್ನು ಆದರಣೆಯಿಲ್ಲದೆ
ಬಿಡುವದಿಲ್ಲ; ನಿಮ್ಮ ಬಳಿಗೆ ನಾನು
ಬರುವೆನು.
19 ಇನ್ನು ಸ್ವಲ್ಪ ಕಾಲವಾದ ಮೇಲೆ ಲೋಕವು
ನನ್ನನ್ನು ನೋಡುವದಿಲ್ಲ. ಆದರೆ ನೀವು
ನನ್ನನ್ನು ನೋಡುವಿರಿ; ನಾನು ಜೀವಿಸುವ
ದರಿಂದ ನೀವು ಸಹ ಜೀವಿಸುವಿರಿ.
20 ನಾನು ನನ್ನ ತಂದೆಯಲ್ಲಿಯೂ ನೀವು

ನನ್ನಲ್ಲಿಯೂ ನಾನು ನಿಮ್ಮ ಲ್ಲಿಯೂ ಇರುವೆನೆಂದು ನೀವು ಆ ದಿನದಲ್ಲಿ ತಿಳಿದು ಕೊಳ್ಳುವಿರಿ.

21 ನನ್ನ ಆಜ್ಞೆಗಳನ್ನು ಹೊಂದಿ ಅವುಗಳನ್ನು ಅನುಸರಿಸುವವನೇ ನನ್ನನ್ನು ಪ್ರೀತಿಸುವವನು; ನನ್ನನ್ನು ಪ್ರೀತಿಸುವವನನ್ನು ನನ್ನ ತಂದೆಯೂ ಪ್ರೀತಿಸುವನು. ನಾನು ಅವನನ್ನು ಪ್ರೀತಿಸಿ ಅವನಿಗೆ ನನ್ನನ್ನು ವ್ಯಕ್ತಪಡಿಸಿ ಕೊಳ್ಳುವೆನು ಎಂದು ಹೇಳಿದನು.

22 ಯೂದನು (ಇಸ್ಕರಿಯೋತನಲ್ಲ)--ಕರ್ತನೇ, ನೀನು ಲೋಕಕ್ಕೆ ಕಾಣಿಸಿಕೊಳ್ಳದೆ ನಮಗೆ ಕಾಣಿಸಿ ಕೊಳ್ಳುವದು ಹೇಗೆ ಎಂದು ಆತನನ್ನು ಕೇಳಿದನು.

23 ಯೇಸು ಪ್ರತ್ಯುತ್ತರವಾಗಿ ಅವನಿಗೆ--
ಯಾವನಾ ದರೂ ನನ್ನನ್ನು ಪ್ರೀತಿಸುವದಾದರೆ
ಅವನು ನನ್ನ ಮಾತುಗಳನ್ನು ಕೈಕೊಳ್ಳುವನು;
ನನ್ನ ತಂದೆಯು ಅವ ನನ್ನು ಪ್ರೀತಿಸುವನು.
ಇದಲ್ಲದೆ ನಾವು ಅವನ ಬಳಿಗೆ ಬಂದು
ಅವನೊಂದಿಗೆ ನಮ್ಮ ನಿವಾಸವನ್ನು ಮಾಡಿ
ಕೊಳ್ಳುವೆವು.
24 ನನ್ನನ್ನು ಪ್ರೀತಿಸದವನು ನನ್ನ ಮಾತು
ಗಳನ್ನು ಕೈಕೊಳ್ಳುವದಿಲ್ಲ; ನೀವು ಕೇಳಿದ
ಮಾತು ನನ್ನದಲ್ಲ; ಆದರೆ ನನ್ನನ್ನು ಕಳುಹಿಸಿದ
ನನ್ನ ತಂದೆಯ ಮಾತೇ.
25 ನಾನು ಇನ್ನೂ ನಿಮ್ಮ ಬಳಿಯಲ್ಲಿ
ಇರುವಾಗಲೇ ಈ ಸಂಗತಿಗಳನ್ನು ನಿಮಗೆ

ಹೇಳಿದ್ದೇನೆ;
26 ತಂದೆಯು ನನ್ನ ಹೆಸರಿನಲ್ಲಿ
ಕಳುಹಿಸಿಕೊಡುವ ಪರಿಶುದ್ಧಾತ್ಮನೆಂಬ
ಆದರಿಕನೇ ಎಲ್ಲವುಗಳನ್ನು ನಿಮಗೆ ಬೋಧಿಸಿ
ನಾನು ನಿಮಗೆ ಹೇಳಿದವುಗಳನ್ನೆಲ್ಲಾ ನಿಮ್ಮ
ನೆನಪಿಗೆ ತರುವನು.
27 ನಾನು ನಿಮಗೆ ಸಮಾಧಾನವನ್ನು ಬಿಟ್ಟು
ಹೋಗುತ್ತೇನೆ, ನನ್ನ ಸಮಾಧಾನವನ್ನು ನಾನು
ನಿಮಗೆ ಕೊಡುತ್ತೇನೆ; ಲೋಕವು ಕೊಡುವ
ರೀತಿಯಲ್ಲಿ ನಾನು ನಿಮಗೆ ಕೊಡುವದಿಲ್ಲ,
ನಿಮ್ಮ ಹೃದಯವು ಕಳವಳಗೊಳ್ಳ ದಿರಲಿ
ಇಲ್ಲವೆ ಅಂಜದಿರಲಿ.
28 ನಾನು ಹೋಗಿ ತಿರಿಗಿ ನಿಮ್ಮ ಬಳಿಗೆ

ಬರುವದು ಹೇಗೆ ಎಂದು ನಾನು ನಿಮಗೆ
ಹೇಳಿದ್ದನ್ನು ನೀವು ಕೇಳಿದ್ದೀರಿ; ನೀವು ನನ್ನನ್ನು
ಪ್ರೀತಿಸಿದ್ದರೆ ನಾನು ನನ್ನ ತಂದೆಯ ಬಳಿಗೆ
ಹೋಗುತ್ತೇನೆಂದು ಹೇಳಿದ್ದಕ್ಕೆ
ಸಂತೋಷಪಡುತ್ತಿದ್ದಿರಿ; ನನ್ನ ತಂದೆಯು
ನನಗಿಂತಲೂ ದೊಡ್ಡವನಾಗಿದ್ದಾನೆ.
29 ಅದು ನಡೆಯುವಾಗ ನೀವು
ನಂಬುವಂತೆ ನಡೆಯು ವದಕ್ಕಿಂತ
ಮುಂಚೆಯೇ ಈಗ ನಾನು ನಿಮಗೆ
ಹೇಳಿದ್ದೇನೆ.
30 ಇನ್ನು ಮೇಲೆ ನಾನು ನಿಮ್ಮೊಂದಿಗೆ
ಬಹಳವಾಗಿ ಮಾತನಾಡುವದಿಲ್ಲ;
ಯಾಕಂದರೆ ಇಹ ಲೋಕದ ಅಧಿಪತಿಯು

ಬರುತ್ತಾನೆ. ಅವನಿಗೆ ಸಂಬಂಧಪಟ್ಟದ್ದು ನನ್ನಲ್ಲಿ
ಏನೂ ಇಲ್ಲ.
31 ನಾನು ತಂದೆಯನ್ನು
ಪ್ರೀತಿಮಾಡುತ್ತೇನೆಂದು ಲೋಕವು
ತಿಳಿಯುವ ಹಾಗೆ ತಂದೆಯು ನನಗೆ ಆಜ್ಞೆ
ಕೊಟ್ಟಂತೆಯೇ ನಾನು ಮಾಡುತ್ತೇನೆ. ಏಳಿರಿ,
ನಾವು ಇಲ್ಲಿಂದ ಹೋಗೋಣ ಅಂದನು.

## ಅಧ್ಯಾಯ 15

1 ನಾನೇ ನಿಜವಾದ ದ್ರಾಕ್ಷೇ ಬಳ್ಳಿ ನನ್ನ ತಂದೆ
ವ್ಯವಸಾಯಗಾರನು.
2 ನನ್ನಲ್ಲಿ ಫಲಫಲಿಸದ ಪ್ರತಿಯೊಂದು

ಕೊಂಬೆಯನ್ನು ಆತನು ತೆಗೆದುಹಾಕುತ್ತಾನೆ; ಫಲಕೊಡುವ ಪ್ರತಿಯೊಂದು ಕೊಂಬೆಯು ಹೆಚ್ಚಾಗಿ ಫಲಕೊಡುವ ಹಾಗೆ ಅದನ್ನು ಶುದ್ಧಿ ಮಾಡುತ್ತಾನೆ.
3 ನಾನು ನಿಮಗೆ ಹೇಳಿದ ಮಾತಿನ ದೆಸೆಯಿಂದ ನೀವು ಈಗ ಶುದ್ಧರಾಗಿದ್ದೀರಿ.
4 ನನ್ನಲ್ಲಿ ನೆಲೆಗೊಂಡಿರ್ರಿ, ನಾನು ನಿಮ್ಮಲ್ಲಿ ನೆಲೆ ಗೊಂಡಿರುವೆನು. ಕೊಂಬೆಯು ದ್ರಾಕ್ಷೇಯಬಳ್ಳಿಯಲ್ಲಿ ನೆಲೆಗೊಂಡಿರದಿದ್ದರೆ ಹೇಗೆ ತನ್ನಷ್ಟಕ್ಕೆ ತಾನೇ ಫಲ ಕೊಡಲಾರದೋ ಹಾಗೆಯೇ ನೀವೂ ನನ್ನಲಿ ನೆಲೆಗೊಂಡಿರದಿದ್ದರೆ ಫಲಕೊಡಲಾರಿರಿ.
5 ನಾನೇ ದ್ರಾಕ್ಷೇಬಳ್ಳಿ, ನೀವು ಕೊಂಬೆಗಳು;

ಒಬ್ಬನು ನನ್ನಲ್ಲಿ ಮತ್ತು ನಾನು ಅವನಲ್ಲಿ ನೆಲೆಗೊಂಡಿದ್ದರೆ ಅವನೇ ಬಹಳ ಫಲವನ್ನು ಕೊಡುವನು; ಯಾಕಂದರೆ ನಾನಿಲ್ಲದೆ ನೀವು ಏನೂ ಮಾಡಲಾರಿರಿ.

6 ಒಬ್ಬನು ನನ್ನಲ್ಲಿ ನೆಲೆಗೊಂಡಿರದಿದ್ದರೆ ಅವನು ಕೊಂಬೆಯಂತೆ ಬಿಸಾಡಲ್ಪಟ್ಟು ಒಣಗಿ ಹೋಗುವದರಿಂದ ಜನರು ಅವುಗಳನ್ನು ಕೂಡಿಸಿ ಬೆಂಕಿಯೊಳಗೆ ಹಾಕುವರು; ಅವು ಸುಡಲ್ಪಡುವವು.

7 ನೀವು ನನ್ನಲ್ಲಿಯೂ ನನ್ನ ವಾಕ್ಯಗಳು ನಿಮ್ಮಲ್ಲಿಯೂ ನೆಲೆಗೊಂಡಿದ್ದರೆ ನಿಮಗೆ ಬೇಕಾದದ್ದನ್ನು ಬೇಡಿಕೊಳ್ಳಿರಿ, ನಿಮಗೆ ಅದು ದೊರೆ ಯುವದು.

8 ನೀವು ಬಹಳ ಫಲವನ್ನು ಕೊಡುವ ದರಿಂದ
ನನ್ನ ತಂದೆಗೆ ಮಹಿಮೆ ಉಂಟಾಗುವದು;
ಹೀಗೆ ನೀವು ನನ್ನ ಶಿಷ್ಯರಾಗುವಿರಿ.
9 ತಂದೆಯು ನನ್ನನ್ನು ಪ್ರೀತಿಸಿದ ಹಾಗೆಯೇ
ನಾನು ನಿಮ್ಮನ್ನು ಪ್ರೀತಿಸಿದ್ದೇನೆ; ನೀವು ನನ್ನ
ಪ್ರೀತಿಯಲ್ಲಿ ನೆಲೆಯಾಗಿರ್ರಿ.
10 ನಾನು ನನ್ನ ತಂದೆಯ ಆಜ್ಞೆಗಳನ್ನು
ಕೈಕೊಂಡು ಆತನ ಪ್ರೀತಿಯಲ್ಲಿ
ನೆಲೆಯಾಗಿರು ವಂತೆಯೇ ನೀವು ನನ್ನ
ಆಜ್ಞೆಗಳನ್ನು ಕೈಕೊಂಡರೆ ನನ್ನ ಪ್ರೀತಿಯಲ್ಲಿ
ನೆಲೆಯಾಗಿರುವಿರಿ.
11 ನನ್ನ ಆನಂದವು ನಿಮ್ಮಲ್ಲಿರುವ
ಹಾಗೆಯೂ ನಿಮ್ಮ ಆನಂದವು

ಸಂಪೂರ್ಣವಾಗುವ ಹಾಗೆಯೂ ನಾನು ಇವುಗಳನ್ನು ನಿಮಗೆ ಹೇಳಿದ್ದೇನೆ.
12 ನಾನು ನಿಮ್ಮನ್ನು ಪ್ರೀತಿಸಿದ ಮೇರೆಗೆ ನೀವು ಒಬ್ಬರನ್ನೊಬ್ಬರು ಪ್ರೀತಿಸಬೇಕೆಂಬದೇ ನನ್ನ ಆಜ್ಞೆಯಾಗಿದೆ.
13 ಒಬ್ಬನು ತನ್ನ ಸ್ನೇಹಿತರಿ ಗೋಸ್ಕರ ತನ್ನ ಪ್ರಾಣವನ್ನು ಕೊಡುವ ಪ್ರೀತಿಗಿಂತ ಹೆಚ್ಚಿನದು ಯಾವದೂ ಇಲ್ಲ.
14 ನಾನು ನಿಮಗೆ ಆಜ್ಞಾಪಿಸಿರುವವುಗಳನ್ನು ಮಾಡಿದರೆ ನೀವು ನನ್ನ ಸ್ನೇಹಿತರಾಗಿರುವಿರಿ.
15 ಇನ್ನು ಮೇಲೆ ನಾನು ನಿಮ್ಮನ್ನು ಆಳುಗಳೆಂದು ಕರೆಯುವದಿಲ್ಲ; ಯಾಕಂದರೆ ತನ್ನ ದಣಿಯು ಮಾಡುವಂಥದ್ದು ಆಳಿಗೆ

ತಿಳಿಯುವದಿಲ್ಲ; ಆದರೆ ನಾನು ನಿಮ್ಮನ್ನು
ಸ್ನೇಹಿತರೆಂದು ಕರೆದಿದ್ದೇನೆ; ಯಾಕಂದರೆ ನನ್ನ
ತಂದೆಯಿಂದ ಕೇಳಿದವುಗಳನ್ನೆಲ್ಲಾ ನಾನು
ನಿಮಗೆ ತಿಳಿಯಪಡಿಸಿದ್ದೇನೆ.
16 ನೀವು ನನ್ನನ್ನು ಆರಿಸಿಕೊಂಡಿಲ್ಲ; ಆದರೆ
ನಾನು ನಿಮ್ಮನ್ನು ಆರಿಸಿ ಕೊಂಡು, ನೀವು
ಹೋಗಿ ಫಲಕೊಡುವಂತೆಯೂ ನಿಮ್ಮ
ಫಲವು ನೆಲೆಗೊಂಡಿರುವಂತೆಯೂ ನಿಮ್ಮನ್ನು
ನೇಮಿಸಿದ್ದೇನೆ. ಆದಕಾರಣ ನೀವು ನನ್ನ
ಹೆಸರಿನಲ್ಲಿ ತಂದೆಯನ್ನು ಏನು
ಕೇಳಿಕೊಂಡರೂ ಆತನು ಅದನ್ನು ನಿಮಗೆ
ಕೊಡುವನು.
17 ನೀವು ಒಬ್ಬರನ್ನೊಬ್ಬರು ಪ್ರೀತಿ

ಮಾಡಬೇಕೆಂದು ನಾನು ಇವುಗಳನ್ನು ನಿಮಗೆ ಆಜ್ಞಾಪಿಸುತ್ತೇನೆ.
18 ಲೋಕವು ನಿಮ್ಮನ್ನು ದ್ವೇಷಮಾಡಿದರೆ ನಿಮಗಿಂತ ಮೊದಲು ಅದು ನನ್ನನ್ನು ದ್ವೇಷಮಾಡಿದೆ ಎಂದು ನಿಮಗೆ ತಿಳಿದದೆ.
19 ನೀವು ಲೋಕದವರಾಗಿದ್ದರೆ ಲೋಕವು ತನ್ನವರನ್ನು ಪ್ರೀತಿಸುತ್ತಿತ್ತು; ಆದರೆ ನೀವು ಲೋಕದವರಲ್ಲದೆ ಇರುವದರಿಂದಲೂ ನಾನು ಲೋಕದೊಳಗಿಂದ ನಿಮ್ಮನ್ನು ಆರಿಸಿಕೊಂಡದ್ದರಿಂದಲೂ ಲೋಕವು ನಿಮ್ಮನ್ನು ದ್ವೇಷಮಾಡುತ್ತದೆ.
20 ತನ್ನ ದಣಿಗಿಂತ ಆಳು ದೊಡ್ಡವನಲ್ಲ ಎಂದು ನಾನು ನಿಮಗೆ ಹೇಳಿದ ಮಾತನ್ನು

ಜ್ಞಾಪಕಮಾಡಿಕೊಳ್ಳಿರಿ; ಅವರು ನನ್ನನ್ನು ಹಿಂಸಿಸಿದರೆ ನಿಮ್ಮನ್ನು ಸಹ ಹಿಂಸಿಸುವರು. ಅವರು ನನ್ನ ಮಾತನ್ನು ಕೈ ಕೊಂಡಿದ್ದರೆ ನಿಮ್ಮ ಮಾತನ್ನು ಸಹ ಕೈಕೊಳ್ಳುವರು.
21 ಆದರೆ ಅವರು ನನ್ನನ್ನು ಕಳುಹಿಸಿದಾತನನ್ನು ತಿಳಿಯದಿರುವದರಿಂದ ನನ್ನ ಹೆಸ ರಿನ ನಿಮಿತ್ತ ಇವುಗಳನ್ನೆಲ್ಲಾ ನಿಮಗೆ ಮಾಡುವರು.
22 ನಾನು ಬಂದು ಅವರಿಗೆ ಹೇಳದಿದ್ದರೆ ಅವರಲ್ಲಿ ಪಾಪವು ಇರುತ್ತಿದ್ದಿಲ್ಲ; ಆದರೆ ಈಗ ಅವರ ಪಾಪಕ್ಕೆ ನೆವವಿಲ್ಲ.
23 ನನ್ನನ್ನು ದ್ವೇಷಮಾಡುವವನು ನನ್ನ ತಂದೆಯನ್ನು ಸಹ ದ್ವೇಷಮಾಡುತ್ತಾನೆ.

24 ಬೇರೆ ಯಾರೂ ಮಾಡದಿರುವ ಕ್ರಿಯೆಗಳನ್ನು ನಾನು ಅವರೊಳಗೆ ಮಾಡದಿದ್ದರೆ ಅವರಿಗೆ ಪಾಪವು ಇರುತ್ತಿರಲಿಲ್ಲ; ಆದರೆ ಈಗ ಅವರು ನನ್ನನ್ನು ಮತ್ತು ನನ್ನ ತಂದೆಯನ್ನು ನೋಡಿ ದ್ವೇಷಮಾಡಿದ್ದಾರೆ.
25 ಆದರೆ--ಅವರು ನನ್ನನ್ನು ನಿಷ್ಕಾರಣವಾಗಿ ದ್ವೇಷ ಮಾಡಿದರೆಂದು ಅವರ ನ್ಯಾಯಪ್ರಮಾಣದಲ್ಲಿ ಬರೆದಿರುವ ಮಾತು ನೆರವೇರುವಂತೆ ಹೀಗಾಯಿತು.
26 ಆದರೆ ತಂದೆಯ ಬಳಿಯಿಂದ ನಾನು ನಿಮಗೆ ಕಳುಹಿಸಿಕೊಡುವ ಆದರಿಕನು ಅಂದರೆ ತಂದೆಯ ಬಳಿಯಿಂದ ಹೊರಡುವ

ಸತ್ಯದ ಆತ್ಮನು ಬಂದಾಗ ಆತನು ನನ್ನ
ವಿಷಯವಾಗಿ ಸಾಕ್ಷಿ ಕೊಡುವನು.
27 ನೀವು ಮೊದಲಿನಿಂದಲೂ ನನ್ನ ಸಂಗಡ
ಇದ್ದದರಿಂದ ನೀವು ಸಹ ಸಾಕ್ಷಿ ಕೊಡುವಿರಿ.

## ಅಧ್ಯಾಯ 16

1 ನೀವು ಅಭ್ಯಂತರಪಡಬಾರದೆಂದು ಈ
ಮಾತುಗಳನ್ನು ನಾನು ನಿಮಗೆ ಹೇಳಿದ್ದೇನೆ.
2 ಅವರು ನಿಮ್ಮನ್ನು ಸಭಾಮಂದಿರಗಳಿಂದ
ಹೊರಗೆ ಹಾಕುವರು; ಹೌದು, ನಿಮ್ಮನ್ನು
ಕೊಲ್ಲುವವನು ದೇವರ ಸೇವೆ
ಮಾಡುತ್ತಾನೆಂದು ನೆನಸುವ ಗಳಿಗೆ ಬರುತ್ತದೆ.

3 ಅವರು ತಂದೆಯನ್ನಾಗಲಿ ಇಲ್ಲವೆ ನನ್ನನ್ನಾ
ಗಲಿ ತಿಳಿಯದಿರುವ ಕಾರಣ ಇವೆಲ್ಲವುಗಳನ್ನು
ನಿಮಗೆ ಮಾಡುವರು.
4 ಆದರೆ ಸಮಯ ಬಂದಾಗ ಇವುಗಳ
ವಿಷಯವಾಗಿ ನಾನು ನಿಮಗೆ
ಹೇಳಿದ್ದೇನೆಂದು ನೀವು
ಜ್ಞಾಪಕಮಾಡಿಕೊಳ್ಳುವಂತೆ ಇವುಗಳನ್ನು
ನಿಮಗೆ ಹೇಳಿದ್ದೇನೆ. ನಾನು ನಿಮ್ಮ ಸಂಗಡಲೇ
ಇದ್ದದರಿಂದ ಪ್ರಾರಂಭದಲ್ಲಿ ಇವುಗಳನ್ನು
ನಿಮಗೆ ಹೇಳಲಿಲ್ಲ.
5 ಆದರೆ ಈಗ ನನ್ನನ್ನು ಕಳುಹಿಸಿದಾತನ
ಬಳಿಗೆ ನಾನು ಹೋಗುತ್ತೇನೆ; ನಿಮ್ಮಲ್ಲಿ
ಒಬ್ಬನಾದರೂ--ನೀನು ಎಲ್ಲಿಗೆ ಹೋಗುತ್ತೀ

ಎಂದು ನನ್ನನ್ನು ಕೇಳುವದಿಲ್ಲ.
6 ಆದರೆ ಇವುಗಳನ್ನು ನಾನು ನಿಮಗೆ ಹೇಳಿದ್ದರಿಂದ ನಿಮ್ಮ ಹೃದಯದಲ್ಲಿ ದುಃಖವು ತುಂಬಿಯದೆ.
7 ಆದರೂ ನಾನು ನಿಮಗೆ ಸತ್ಯವನ್ನು ಹೇಳುತ್ತೇನೆ; ನಾನು ಹೋಗುವದು ನಿಮಗೆ ಹಿತಕರವಾಗಿದೆ; ಯಾಕಂದರೆ ನಾನು ಹೋಗದಿದ್ದರೆ ಆದರಿಕನು ನಿಮ್ಮ ಬಳಿಗೆ ಬರುವದಿಲ್ಲ; ನಾನು ಹೋದರೆ ಆತನನ್ನು ನಿಮ್ಮ ಬಳಿಗೆ ಕಳುಹಿಸುವೆನು.
8 ಆತನು ಬಂದಾಗ ಪಾಪ ನೀತಿ ನ್ಯಾಯ ತೀರ್ವಿಕೆಯ ವಿಷಯಗಳಲ್ಲಿಯೂ
9 ಅವರು ನನ್ನನ್ನು ನಂಬದೆ ಇರುವದರಿಂದ

ಪಾಪದ ವಿಷಯವಾಗಿಯೂ
10 ನಾನು ನನ್ನ ತಂದೆಯ ಬಳಿಗೆ
ಹೋಗುವದರಿಂದ ನೀವು ನನ್ನನ್ನು ಎಂದಿಗೂ
ನೋಡದ ಕಾರಣ ನೀತಿಯ
ವಿಷಯವಾಗಿಯೂ
11 ಇಹಲೋಕಾಧಿಪತಿಯು
ನ್ಯಾಯತೀರ್ಪನ್ನು ಹೊಂದಿರುವದರಿಂದ
ನ್ಯಾಯ ತೀರ್ವಿಕೆಯ ವಿಷಯವಾಗಿಯೂ
ಲೋಕವನ್ನು ಗದರಿಸುವನು.
12 ನಾನು ನಿಮಗೆ ಹೇಳಬೇಕಾದ
ವಿಷಯಗಳು ಇನ್ನೂ ಬಹಳ ಇವೆ; ಆದರೆ
ನೀವು ಈಗ ಅವುಗಳನ್ನು ಹೊರಲಾರಿರಿ;
13 ಆದರೆ ಆತನು ಅಂದರೆ ಸತ್ಯದ ಆತ್ಮನು

ಬಂದಾಗ ಆತನು ನಿಮ್ಮನ್ನು ಎಲ್ಲಾ ಸತ್ಯಕ್ಕೆ ನಡಿಸುವನು. ಆತನು ತನ್ನಷ್ಟಕ್ಕೆ ತಾನೇ ಮಾತನಾಡದೆ ತಾನು ಕೇಳಿದವುಗಳನ್ನೇ ಮಾತನಾಡುತ್ತಾನೆ; ಮುಂದೆ ಬರುವದಕ್ಕಿರುವ ವಿಷಯುಗಳನ್ನು ಆತನು ನಿಮಗೆ ತೋರಿಸುವನು.
14 ಆತನು ನನ್ನನ್ನು ಮಹಿಮೆಪಡಿ ಸುವನು; ಆತನು ನನ್ನದರೊಳಗಿಂದ ತೆಗೆದುಕೊಂಡು ನಿಮಗೆ ತಿಳಿಯುಪಡಿಸುವನು.
15 ತಂದೆಗೆ ಇರುವವು ಗಳೆಲ್ಲವು ನನ್ನವೇ; ಆದದರಿಂದಲೇ ಆತನು ನನ್ನದರೊ ಳಗಿಂದ ತೆಗೆದುಕೊಂಡು ನಿಮಗೆ ತಿಳಿಯುಪಡಿಸುವನು ಎಂದು ನಾನು ಹೇಳಿದೆನು.

16 ಸ್ವಲ್ಪ ಕಾಲವಾದ ಮೇಲೆ ನೀವು ನನ್ನನ್ನು
ನೋಡುವದಿಲ್ಲ; ತಿರಿಗಿ ಸ್ವಲ್ಪ ಕಾಲವಾದ
ಮೇಲೆ ನೀವು ನನ್ನನ್ನು ನೋಡುವಿರಿ;
ಯಾಕಂದರೆ ನಾನು ತಂದೆಯ ಬಳಿಗೆ
ಹೋಗುತ್ತೇನೆ ಅಂದನು.
17 ಆಗ ಆತನ ಶಿಷ್ಯರಲ್ಲಿ ಕೆಲವರು--ಈತನು
ನಮಗೆ ಹೇಳುವದೇನು? ಸ್ವಲ್ಪ ಕಾಲವಾದ
ಮೇಲೆ ನೀವು ನನ್ನನ್ನು ನೋಡುವದಿಲ್ಲ; ತಿರಿಗಿ
ಸ್ವಲ್ಪಕಾಲವಾದ ಮೇಲೆ ನೀವು ನನ್ನನ್ನು
ನೋಡುವಿರಿ; ಯಾಕಂದರೆ ನಾನು ತಂದೆಯ
ಬಳಿಗೆ ಹೋಗುತ್ತೇನೆ ಅನ್ನುತ್ತಾನಲಾ ಎಂದು
ತಮ್ಮುತಮ್ಮೊಳಗೆ ಮಾತನಾಡಿಕೊಂಡ
18 ಆದದರಿಂದ ಅವರು--ಈತನು ಹೇಳುವ

ಈ ಮಾತೇನು? ಸ್ವಲ್ಪಕಾಲ ಎಂದು ಹೇಳುತ್ತಾನಲ್ಲಾ? ಈತನು ಹೇಳುವದನ್ನು ನಾವು ಅರಿಯೆವು ಅಂದರು.
19 ಯೇಸು ತನ್ನನ್ನು ಪ್ರಶ್ನಿಸುವದಕ್ಕೆ ಅಪೇಕ್ಷಿಸುತ್ತಿ ದ್ದಾರೆಂದು ತಿಳಿದು ಅವರಿಗೆ--ಸ್ವಲ್ಪ ಕಾಲವಾದ ಮೇಲೆ ನೀವು ನನ್ನನ್ನು ನೋಡುವದಿಲ್ಲ; ತಿರಿಗಿ ಸ್ವಲ್ಪಕಾಲವಾದ ಮೇಲೆ ನನ್ನನ್ನು ನೋಡುವಿರಿ ಎಂದು ನಾನು ನಿಮಗೆ ಹೇಳಿದ್ದಕ್ಕೆ ನಿಮ್ಮ ನಿಮ್ಮೊಳಗೆ ವಿಚಾರಿಸಿಕೊಳ್ಳುತ್ತೀರೋ?
20 ನಾನು ನಿಮಗೆ ನಿಜನಿಜವಾಗಿ ಹೇಳುತ್ತೇನೆ--ನೀವು ಅಳುತ್ತಾ ಗೋಳಾಡುವಿರಿ, ಆದರೆ ಲೋಕವು

ಸಂತೋಷಿಸುವದು; ನೀವು ದುಃಖಿಸುವಿರಿ,
ಆದರೆ ನಿಮ್ಮ ದುಃಖವು ಹೋಗಿ ಆನಂದವು
ಬರುವದು.
21 ಒಬ್ಬ ಸ್ತ್ರೀಗೆ ತನ್ನ ಪ್ರಸವವೇದನೆಯ ಗಳಿಗೆ
ಬಂದಾಗ ದುಃಖವಿರುವದು; ಆಕೆಯು
ಮಗುವನ್ನು ಹೆತ್ತಕೂಡಲೆ ಈ ಲೋಕದೊಳಗೆ
ಒಬ್ಬ ಮನುಷ್ಯನು ಹುಟ್ಟಿದನೆಂದು
ಸಂತೋಷದಿಂದ ಆ ನೋವನ್ನು ಆಕೆಯು
ನೆನಪಿಗೆ ತರುವದೇ ಇಲ್ಲ.
22 ಆದದರಿಂದ ಈಗ ನಿಮಗೆ
ದುಃಖವುಂಟು; ಆದರೆ ನಾನು ನಿಮ್ಮನ್ನು
ತಿರಿಗಿ ನೋಡುವೆನು; ಆಗ ನಿಮ್ಮ ಹೃದಯವು
ಉಲ್ಲಾಸಿಸುವದು; ನಿಮ್ಮ ಆನಂದವನ್ನು

ನಿಮ್ಮಿಂದ ಯಾರೂ ತೆಗೆಯುವದಿಲ್ಲ.
23 ಆ ದಿನದಲ್ಲಿ ನೀವು ನನ್ನನ್ನು ಏನೂ
ಕೇಳುವದಿಲ್ಲ. ನಾನು ನಿಮಗೆ ನಿಜನಿಜವಾಗಿ
ಹೇಳುತ್ತೇನೆ--ನೀವು ನನ್ನ ಹೆಸರಿನಲ್ಲಿ
ತಂದೆಯನ್ನು ಏನು ಕೇಳಿಕೊಂಡರೂ ಅದನ್ನು
ಆತನು ನಿಮಗೆ ಕೊಡುವನು.
24 ನೀವು ಇದುವರೆಗೆ ನನ್ನ ಹೆಸರಿನಲ್ಲಿ ಏನೂ
ಬೇಡಿಕೊಳ್ಳಲಿಲ್ಲ; ಬೇಡಿಕೊಳ್ಳಿರಿ, ನಿಮಗೆ
ದೊರೆಯುವದು; ಆಗ ನಿಮ್ಮ ಆನಂದವು
ಪರಿಪೂರ್ಣವಾಗುವದು.
25 ಇವುಗಳನ್ನು ನಾನು ಸಾಮ್ಯಗಳಿಂದ
ನಿಮಗೆ ಹೇಳಿದ್ದೇನೆ; ಆದರೆ ನಾನು ಇನ್ನು
ಸಾಮ್ಯಗಳಿಂದ ಮಾತನಾಡದೆ ತಂದೆಯ

ವಿಷಯ ನಿಮಗೆ ಸ್ಪಷ್ಟವಾಗಿ ತಿಳಿಸುವ ಸಮಯ ಬರುತ್ತದೆ.
26 ಆ ದಿವಸದಲ್ಲಿ ನೀವು ನನ್ನ ಹೆಸರಿನಲ್ಲಿ ಬೇಡಿಕೊಳ್ಳುವಿರಿ; ನಿಮಗೋಸ್ಕರ ತಂದೆಯನ್ನು ಕೇಳಿಕೊಳ್ಳುವೆನೆಂದು ನಾನು ನಿಮಗೆ ಹೇಳು ವದಿಲ್ಲ.
27 ನೀವು ನನ್ನನ್ನು ಪ್ರೀತಿಸಿ ನಾನು ದೇವರ ಬಳಿಯಿಂದ ಹೊರಟುಬಂದೆನೆಂದು ನಂಬಿದ್ದರಿಂದ ತಂದೆಯು ತಾನೇ ನಿಮ್ಮನ್ನು ಪ್ರೀತಿಸುತ್ತಾನೆ.
28 ನಾನು ತಂದೆಯ ಬಳಿಯಿಂದ ಹೊರಟು ಈ ಲೋಕಕ್ಕೆ ಬಂದಿದ್ದೇನೆ; ತಿರಿಗಿ ಈ ಲೋಕವನ್ನು ಬಿಟ್ಟು ತಂದೆಯ ಬಳಿಗೆ

ಹೋಗುತ್ತೇನೆ ಅಂದನು.
29 ಆತನ ಶಿಷ್ಯರು ಆತನಿಗೆ--ಇಗೋ, ಈಗ
ನೀನು ಸಾಮ್ಯರೂಪದಲ್ಲಿ ಮಾತನಾಡದೆ
ಸ್ಪಷ್ಟವಾಗಿಯೇ ಮಾತನಾಡುತ್ತೀ.
30 ನೀನು ಎಲ್ಲಾ ವಿಷಯಗಳನ್ನು
ತಿಳಿದಾತನೆಂದೂ ಯಾವ ಮನುಷ್ಯನು
ನಿನ್ನನ್ನು ಕೇಳು ವದು ಅಗತ್ಯವಿಲ್ಲವೆಂದೂ ಈಗ
ನಮಗೆ ನಿಶ್ಚಯ ವಾಯಿತು; ಇದರಿಂದ
ನೀನು ದೇವರ ಕಡೆಯಿಂದ ಹೊರಟು
ಬಂದಿದ್ದೀ ಎಂದು ನಾವು ನಂಬುತ್ತೇವೆ
ಅಂದರು.
31 ಅದಕ್ಕೆ ಯೇಸು ಪ್ರತ್ಯುತ್ತರವಾಗಿ ಅವರಿಗೆ--
ಈಗ ನೀವು ನಂಬುತ್ತೀರೋ?

32 ಇಗೋ, ಒಬ್ಬೊಬ್ಬನು ತನ್ನ ತನ್ನ ಸ್ಥಳಕ್ಕೆ ಚದರಿ ಹೋಗಿ ನನ್ನನ್ನು ಒಂಟಿಗನಾಗಿ ಬಿಡುವ ಗಳಿಗೆ ಬರುವದು. ಹೌದು, ಈಗಲೇ ಬಂದಿದೆ. ಆದಾಗ್ಯೂ ನಾನು ಒಂಟಿಗನಲ್ಲ; ತಂದೆಯು ನನ್ನ ಸಂಗಡ ಇದ್ದಾನೆ.
33 ನನ್ನಲ್ಲಿ ನಿಮಗೆ ಸಮಾಧಾನವು ಉಂಟಾಗುವಂತೆ ಇವುಗಳನ್ನು ನಾನು ನಿಮಗೆ ಹೇಳಿದ್ದೇನೆ, ಲೋಕದಲ್ಲಿ ನಿಮಗೆ ಸಂಕಟ ಇರುವದು; ಆದರೆ ಧೈರ್ಯವಾಗಿರ್ರಿ; ನಾನು ಲೋಕ ವನ್ನು ಜಯಿಸಿದ್ದೇನೆ ಅಂದನು.

## ಅಧ್ಯಾಯ 17

1 ಯೇಸು ಈ ಮಾತುಗಳನ್ನು ಹೇಳಿ
ಪರಲೋಕದ ಕಡೆಗೆ ಕಣ್ಣುಗಳನ್ನೆತ್ತಿ--
ತಂದೆಯೇ, ಈಗ ಗಳಿಗೆ ಬಂದಿದೆ; ನಿನ್ನ
ಮಗನನ್ನು ಮಹಿಮೆಪಡಿಸು; ಆಗ ನಿನ್ನ
ಮಗನೂ ನಿನ್ನನ್ನು
ಮಹಿಮೆಪಡಿಸುವದಕ್ಕಾಗುವದು.
2 ನೀನು ಆತನಿಗೆ ಯಾರಾರನ್ನು
ಕೊಟ್ಟಿದ್ದೀಯೋ ಅವರಿಗೆ ಆತನು
ನಿತ್ಯಜೀವವನ್ನು ಕೊಡಬೇಕೆಂದು ಆತನಿಗೆ
ಎಲ್ಲಾ ಮನುಷ್ಯರ ಮೇಲೆ ಅಧಿಕಾರವನ್ನು
ಕೊಟ್ಟಿದ್ದೀ.
3 ಒಬ್ಬನೇ ಸತ್ಯದೇವರಾಗಿರುವ ನಿನ್ನನ್ನೂ
ನೀನು ಕಳುಹಿಸಿಕೊಟ್ಟ ಯೇಸು ಕ್ರಿಸ್ತನನ್ನೂ

ಅವರು ಅರಿತು ಕೊಳ್ಳುವದೇ ನಿತ್ಯಜೀವ.
4 ನಾನು ನಿನ್ನನ್ನು ಭೂಮಿಯ ಮೇಲೆ
ಮಹಿಮೆಪಡಿಸಿದ್ದೇನೆ; ನೀನು ನನಗೆ ಕೊಟ್ಟ
ಕೆಲಸವನ್ನು ನಾನು ಮುಗಿಸಿದ್ದೇನೆ;
5 ಓ ತಂದೆಯೇ, ಹೀಗೆ ಲೋಕವು
ಇದ್ದದ್ದಕ್ಕಿಂತ ಮುಂಚೆ ನಿನ್ನೊಂದಿಗೆ ನನಗಿದ್ದ
ಮಹಿಮೆಯಿಂದ ನೀನು ಸ್ವತಃ ನನ್ನನ್ನು
ಮಹಿಮೆಪಡಿಸು.
6 ಲೋಕದೊಳಗಿಂದ ನೀನು ನನಗೆ ಕೊಟ್ಟ
ಮನು ಷ್ಯರಿಗೆ ನಾನು ನಿನ್ನ ಹೆಸರನ್ನು
ಪ್ರತ್ಯಕ್ಷಪಡಿಸಿದ್ದೇನೆ. ಅವರು ನಿನ್ನವರಾಗಿದ್ದರು;
ನೀನು ಅವರನ್ನು ನನಗೆ ಕೊಟ್ಟಿದ್ದೀ; ಇದಲ್ಲದೆ
ಅವರು ನಿನ್ನ ವಾಕ್ಯವನ್ನು ಕೈ ಕೊಂಡಿದ್ದಾರೆ.

7 ನೀನು ನನಗೆ ಕೊಟ್ಟಿರುವವುಗಳೆಲ್ಲವು
ನಿನ್ನವುಗಳೇ ಎಂದು ಈಗ ಅವರು
ತಿಳಿದುಕೊಂಡಿದ್ದಾರೆ.
8 ನೀನು ನನಗೆ ಕೊಟ್ಟ ವಾಕ್ಯಗಳನ್ನು ನಾನು
ಇವರಿಗೆ ಕೊಟ್ಟಿದ್ದೇನೆ. ಇವರು ಅವುಗಳನ್ನು
ಅಂಗೀಕರಿಸಿದ್ದಾರೆ; ನಾನು ನಿನ್ನ
ಬಳಿಯಿಂದಲೇ ಹೊರಟುಬಂದವನೆಂದು
ನಿಶ್ಚಯವಾಗಿ ತಿಳಿದು ನೀನೇ ನನ್ನನ್ನು
ಕಳುಹಿಸಿದ್ದೀ ಯೆಂದು ನಂಬಿದ್ದಾರೆ.
9 ನಾನು ಅವರಿಗೋಸ್ಕರ ಕೇಳಿ ಕೊಳ್ಳುತ್ತೇನೆ;
ನೀನು ನನಗೆ ಕೊಟ್ಟವರಿಗೋಸ್ಕರವೇ
ಹೊರತು ನಾನು ಲೋಕಕ್ಕೋಸ್ಕರ
ಕೇಳಿಕೊಳ್ಳುವದಿಲ್ಲ; ಯಾಕಂದರೆ ಅವರು

ನಿನ್ನವರು.
10 ನನ್ನವರೆಲ್ಲರು ನಿನ್ನ ವರೇ; ನಿನ್ನವರು
ನನ್ನವರೇ; ಅವರಲ್ಲಿ ಮಹಿಮೆ ಪಟ್ಟಿದ್ದೇನೆ.
11 ಇನ್ನು ಮೇಲೆ ನಾನು ಲೋಕದಲ್ಲಿ
ಇರುವದಿಲ್ಲ; ಆದರೆ ಇವರು
ಲೋಕದಲ್ಲಿದ್ದಾರೆ; ನಾನು ನಿನ್ನ ಬಳಿಗೆ
ಬರುತ್ತೇನೆ. ಪರಿಶುದ್ಧನಾದ ತಂದೆಯೇ,
ನಾವು ಒಂದಾಗಿರುವ ಹಾಗೆಯೇ ಅವರು
ಸಹ ಒಂದಾಗಿರುವಂತೆ ನೀನು ನನಗೆ
ಕೊಟ್ಟಿರುವವರನ್ನು ನಿನ್ನ ಸ್ವಂತ ಹೆಸರಿನಲ್ಲಿ
ಕಾಪಾಡು.
12 ನಾನು ಅವರೊಂದಿಗೆ ಲೋಕದಲ್ಲಿದ್ದಾಗ
ನಿನ್ನ ಹೆಸರಿನಲ್ಲಿ ಅವರನ್ನು ಕಾಪಾಡಿದೆನು;

ನೀನು ನನಗೆ ಕೊಟ್ಟವರನ್ನು ನಾನು ಕಾಪಾಡಿದ್ದೇನೆ; ಬರಹವು ನೆರವೇರುವ ಹಾಗೆ ಆ ನಾಶನದ ಮಗನೇ ಹೊರತು ಅವರಲ್ಲಿ ಒಬ್ಬನೂ ನಾಶವಾಗಲಿಲ್ಲ.
13 ಈಗ ನಾನು ನಿನ್ನ ಬಳಿಗೆ ಬರು ತ್ತೇನೆ ನನ್ನ ಆನಂದವು ಅವರೊಳಗೆ ಈಡೇರುವಂತೆ ನಾನು ಲೋಕದಲ್ಲಿ ಈ ವಿಷಯಗಳನ್ನು ಮಾತನಾಡು ತ್ತೇನೆ.
14 ನಾನು ನಿನ್ನ ವಾಕ್ಯವನ್ನು ಅವರಿಗೆ ಕೊಟ್ಟಿದ್ದೇನೆ ನಾನು ಲೋಕದವನಲ್ಲದ ಪ್ರಕಾರ ಅವರೂ ಲೋಕದವರಲ್ಲವಾದದರಿಂದ ಲೋಕವು ಅವರನ್ನು ಹಗೆಮಾಡಿಯದೆ.

15 ನೀನು ಅವರನ್ನು ಲೋಕದೊಳಗಿಂದ
ತೆಗೆಯಬೇಕೆಂತಲ್ಲ; ಅವರನ್ನು ಕೇಡಿನಿಂದ
ಕಾಪಾಡಬೇಕೆಂದು ನಾನು ಕೇಳಿಕೊಳ್ಳು
ತ್ತೇನೆ.
16 ನಾನು ಲೋಕದವನಲ್ಲದ ಪ್ರಕಾರ
ಅವರೂ ಲೋಕದವರಲ್ಲ.
17 ನಿನ್ನ ಸತ್ಯದಿಂದ ಅವರನ್ನು ಪ್ರತಿಷ್ಠೆ ಪಡಿಸು;
ನಿನ್ನ ವಾಕ್ಯವೇ ಸತ್ಯವು
18 ನೀನು ನನ್ನನ್ನು ಲೋಕದೊಳಗೆ
ಕಳುಹಿಸಿದ ಹಾಗೆಯೇ ನಾನು ಸಹ ಅವರನ್ನು
ಲೋಕದೊಳಗೆ ಕಳುಹಿಸಿದ್ದೇನೆ.
19 ಅವರು ಸತ್ಯದಲ್ಲಿ ಪ್ರತಿಷ್ಠಿಸಲ್ಪಡುವಂತೆ
ನಾನು ನನ್ನನ್ನು ಅವರಿ ಗೋಸ್ಕರ

ಪ್ರತಿಷ್ಠಿಸಿಕೊಳ್ಳುತ್ತೇನೆ.
20 ಆದರೆ ಇವರಿಗೋಸ್ಕರ ಮಾತ್ರವಲ್ಲದೆ ಇವರ
ವಾಕ್ಯದಿಂದ ನನ್ನ ಮೇಲೆ
ನಂಬಿಕೆಯಿಡುವವರಿಗೋ ಸ್ಕರವೂ
ಕೇಳಿಕೊಳ್ಳುತ್ತೇನೆ.
21 ಇದಲ್ಲದೆ ಅವರೆಲ್ಲರೂ ನಮ್ಮಲ್ಲಿ
ಒಂದಾಗಿರಬೇಕೆಂತಲೂ ನೀನು ನನ್ನನ್ನು
ಕಳುಹಿಸಿದ್ದೀ ಎಂದು ಲೋಕವು
ನಂಬುವಂತೆಯೂ ತಂದೆಯಾದ ನೀನು
ನನ್ನಲ್ಲಿಯೂ ನಾನು ನಿನ್ನಲ್ಲಿಯೂ ಇರುವ
ಹಾಗೆ ಇವರು ಸಹ ನಮ್ಮಲ್ಲಿ ಒಂದಾಗಿರ
ಬೇಕೆಂತಲೂ ಕೇಳಿಕೊಳ್ಳುತ್ತೇನೆ.
22 ನಾವು ಒಂದಾಗಿರುವ ಹಾಗೆ ಇವರೂ

ಒಂದಾಗಿರುವಂತೆ ನೀನು ನನಗೆ ಕೊಟ್ಟ
ಮಹಿಮೆಯನ್ನು ನಾನು ಇವರಿಗೆ
ಕೊಟ್ಟಿದ್ದೇನೆ.
23 ನಾನು ಇವರಲ್ಲಿಯೂ ನೀನು
ನನ್ನಲ್ಲಿಯೂ (ಇರುವಂತೆ) ಅವರೂ ಒಂದಾಗಿ
ಪರಿಪೂರ್ಣರಾಗಿ ರುವರು; ನೀನು ನನ್ನನ್ನು
ಕಳುಹಿಸಿದ್ದೀ ಎಂತಲೂ ನನ್ನನ್ನು ಪ್ರೀತಿ
ಮಾಡಿದಂತೆ ಅವರನ್ನು ನೀನು
ಪ್ರೀತಿಮಾಡಿದ್ದೀ ಎಂತಲೂ ಲೋಕವು
ತಿಳಿದುಕೊಳ್ಳುವದು.
24 ತಂದೆ ಯೇ, ನೀನು ನನಗೆ ಕೊಟ್ಟಿರುವ
ಮಹಿಮೆಯನ್ನು ನೀನು ನನಗೆ ಕೊಟ್ಟವರು
ಸಹ ನೋಡುವ ಹಾಗೆಯೂ ನಾನಿರುವಲ್ಲಿ

ಅವರು ನನ್ನೊಂದಿಗೆ ಇರುವಂತೆಯೂ ನಾನು ಇಚ್ಛೈಸುತ್ತೇನೆ. ಜಗದುತ್ಪತ್ತಿಗೆ ಮುಂಚೆ ನೀನು ನನ್ನನ್ನು ಪ್ರೀತಿಸಿದಿ.
25 ಓ ನೀತಿಯುಳ್ಳ ತಂದೆಯೇ, ಲೋಕವು ನಿನ್ನನ್ನು ತಿಳಿಯಲಿಲ್ಲ; ಆದರೆ ನಾನು ನಿನ್ನನ್ನು ತಿಳಿದಿದ್ದೇನೆ, ನೀನೇ ನನ್ನನ್ನು ಕಳುಹಿಸಿದ್ದೀ ಎಂದು ಇವರು ತಿಳಿದಿದ್ದಾರೆ.
26 ನೀನು ನನ್ನನ್ನು ಪ್ರೀತಿಸಿದಂಥ ಪ್ರೀತಿಯು ಅವರಲ್ಲಿ ಇರಬೇಕೆಂತಲೂ ನಾನು ಅವರಲ್ಲಿ ಇರುವಂತೆಯೂ ನಾನು ಅವರಿಗೆ ನಿನ್ನ ಹೆಸರನ್ನು ಪ್ರಕಟಿಸಿದ್ದೇನೆ; ಇನ್ನೂ ಪ್ರಕಟಿಸುವೆನು ಅಂದನು.

# ಅಧ್ಯಾಯ 18

1 ಯೇಸು ಈ ಮಾತುಗಳನ್ನು ಆಡಿದ ಮೇಲೆ
ತನ್ನ ಶಿಷ್ಯರೊಂದಿಗೆ ಕೆದ್ರೋನ್ ಹಳ್ಳದ ಆಚೆಗೆ
ಹೋದನು. ಅಲ್ಲಿ ಒಂದು ತೋಟ ವಿತ್ತು,
ಆತನೂ ಆತನ ಶಿಷ್ಯರೂ ಅದರೊಳಗೆ ಪ್ರವೇಶಿ
ಸಿದರು.
2 ಆತನನ್ನು ಹಿಡುಕೊಟ್ಟ ಯೂದನಿಗೂ ಆ
ಸ್ಥಳವು ಗೊತ್ತಿತ್ತು; ಯಾಕಂದರೆ ಅನೇಕ ಸಾರಿ
ಯೇಸು ತನ್ನ ಶಿಷ್ಯರೊಂದಿಗೆ ಅಲ್ಲಿ
ಕೂಡಿಬರುತ್ತಿದ್ದನು.
3 ಆಗ ಯೂದನು ಪ್ರಧಾನಯಾಜಕರಿಂದ
ಮತ್ತು ಫರಿಸಾಯ ರಿಂದ ಜನರ ಗುಂಪನ್ನೂ

ಅಧಿಕಾರಿಗಳನ್ನೂ ಪಡೆದು ಕೊಂಡು
ದೀಪಗಳಿಂದಲೂ ಪಂಜುಗಳಿಂದಲೂ
ಆಯುಧಗಳಿಂದಲೂ ಅಲ್ಲಿಗೆ ಬಂದನು.
4 ಯೇಸು ತನ್ನ ಮೇಲೆ ಬರುವವುಗಳನ್ನೆಲ್ಲಾ
ತಿಳಿದುಕೊಂಡು ಮುಂದಕ್ಕೆ ಹೋಗಿ
ಅವರಿಗೆ--ನೀವು ಯಾರನ್ನು ಹುಡುಕುತ್ತೀರಿ
ಎಂದು ಕೇಳಲು
5 ಅವರು ಪ್ರತ್ಯುತ್ತರ ವಾಗಿ ಆತನಿಗೆ--
ನಜರೇತಿನ ಯೇಸು ಅಂದರು. ಅದಕ್ಕೆ
ಯೇಸು ಅವರಿಗೆ--ನಾನೇ ಆತನು ಅಂದನು.
ಮತ್ತು ಆತನನ್ನು ಹಿಡುಕೊಡುವ ಯೂದನು
ಸಹ ಅವರೊಂದಿಗೆ ನಿಂತಿದ್ದನು.
6 ಆತನು ಅವರಿಗೆ--ನಾನೇ ಆತನು ಎಂದು

ಹೇಳಿದ ಕೂಡಲೇ ಅವರು ಹಿಂದಕ್ಕೆ ಸರಿದು
ನೆಲಕ್ಕೆ ಬಿದ್ದರು.
7 ಆಗ ಆತನು ತಿರಿಗಿ ಅವರಿಗೆ--ನೀವು
ಯಾರನ್ನು ಹುಡುಕುತ್ತೀರಿ ಎಂದು ಕೇಳಲು
ಅವರು--ನಜರೇತಿನ ಯೇಸುವನ್ನು
ಅಂದರು.
8 ಯೇಸು ಪ್ರತ್ಯುತ್ತರವಾಗಿ--ನಾನೇ ಆತನು
ಎಂದು ನಿಮಗೆ ಹೇಳಿದೆನಲ್ಲಾ; ನೀವು ನನ್ನನ್ನೆ
ಹುಡುಕು ವುದಾದರೆ ಇವರನ್ನು
ಹೋಗಬಿಡಿರಿ ಅಂದನು.
9 ಹೀಗೆ--ನೀನು ನನಗೆ ಕೊಟ್ಟವರಲ್ಲಿ
ಒಬ್ಬನನ್ನಾದರೂ ನಾನು ಕಳಕೊಳ್ಳಲಿಲ್ಲವೆಂದು
ಆತನು ಹೇಳಿದ ಮಾತು ನೆರವೇರುವಂತೆ

ಇದಾಯಿತು.
10 ಆಗ ಸೀಮೋನ ಪೇತ್ರನು ತನ್ನಲ್ಲಿದ್ದ
ಕತ್ತಿಯನ್ನು ಹಿರಿದು ಮಹಾ ಯಾಜಕನ
ಆಳನ್ನು ಹೊಡೆದು ಅವನ ಬಲಗಿವಿಯನ್ನು
ಕತ್ತರಿಸಿದನು; ಆ ಆಳಿನ ಹೆಸರು ಮಲ್ಕನು.
11 ಆಗ ಯೇಸು ಪೇತ್ರನಿಗೆ--ನಿನ್ನ ಕತ್ತಿಯನ್ನು
ಒರೆಗೆಹಾಕು. ನನ್ನ ತಂದೆಯೂ ನನಗೆ ಕೊಟ್ಟ
ಪಾತ್ರೆಯನ್ನು ನಾನು ಕುಡಿಯಬಾರದೋ
ಎಂದು ಹೇಳಿದನು.
12 ತರುವಾಯ ಜನರ ಗುಂಪೂ
ನಾಯಕನೂ ಯೆಹೂದ್ಯರ ಅಧಿಕಾರಿಗಳೂ
ಯೇಸುವನ್ನು ಹಿಡಿದು ಕಟ್ಟಿ
13 ಆತನನ್ನು ಮೊದಲು ಅನ್ನನ ಬಳಿಗೆ

ಕರೆದು ಕೊಂಡು ಹೋದರು; ಅವನು ಆ
ವರುಷದ ಮಹಾ ಯಾಜಕನಾಗಿದ್ದ
ಕಾಯಫನ ಮಾವನಾಗಿದ್ದನು.
14 ಜನರಿಗೋಸ್ಕರ ಒಬ್ಬ ಮನುಷ್ಯನು
ಸಾಯುವದು ಹಿತವೆಂದು ಯೆಹೂದ್ಯರಿಗೆ
ಆಲೋಚನೆ ಹೇಳಿಕೊಟ್ಟ ಕಾಯಫನು
ಇವನೇ.
15 ಸೀಮೋನ ಪೇತ್ರನು ಯೇಸುವನ್ನು
ಹಿಂಬಾಲಿಸಿದನು; ಹಾಗೆಯೇ ಬೇರೊಬ್ಬ
ಶಿಷ್ಯನೂ ಆತನನ್ನು ಹಿಂಬಾಲಿಸಿದನು; ಆ
ಶಿಷ್ಯನು ಮಹಾಯಾಜಕನಿಗೆ
ಪರಿಚಯವಿದ್ದದರಿಂದ ಯೇಸು ವಿನ ಸಂಗಡ
ಮಹಾಯಾಜಕನ ಭವನದೊಳಗೆ

ಹೋದನು.
16 ಪೇತ್ರನು ಬಾಗಲಿನ ಬಳಿಯಲ್ಲಿ ಹೊರಗೆ
ನಿಂತಿದ್ದನು; ಹೀಗಿರಲಾಗಿ ಮಹಾಯಾಜಕನಿಗೆ
ಪರಿಚಯುವಿದ್ದ ಆ ಮತ್ತೊಬ್ಬ ಶಿಷ್ಯನು ಹೊರಗೆ
ಹೋಗಿ ಬಾಗಲು ಕಾಯುವವಳ ಸಂಗಡ
ಮಾತನಾಡಿ ಪೇತ್ರನನ್ನು ಒಳಗೆ
ಕರೆದುಕೊಂಡು ಬಂದನು.
17 ಆಗ ಬಾಗಲು ಕಾಯುವವಳಾದ ಆ
ಹುಡುಗಿಯು ಪೇತ್ರ ನಿಗೆ--ನೀನು ಸಹ ಈ
ಮನುಷ್ಯನ ಶಿಷ್ಯರಲ್ಲಿ ಒಬ್ಬನಲ್ಲವೋ ಎಂದು
ಕೇಳಲು ಅವನು--ನಾನಲ್ಲ ಅಂದನು.
18 ಆಗ ಚಳಿಯಾಗಿದ್ದದರಿಂದ ಆಳುಗಳೂ
ಅಧಿಕಾರಿಗಳೂ ಇದ್ದಲುಗಳಿಂದ ಬೆಂಕಿಮಾಡಿ

ಚಳಿ ಕಾಯಿಸಿಕೊಳ್ಳುತ್ತಿದ್ದರು; ಪೇತ್ರನೂ ಅವರೊಂದಿಗೆ ನಿಂತು ಕಾಯಿಸಿಕೊಳ್ಳುತ್ತಿದ್ದನು.
19 ತರುವಾಯ ಮಹಾಯಾಜಕನು ಆತನ ಶಿಷ್ಯರ ವಿಷಯವಾಗಿಯೂ ಆತನ ಬೋಧನೆಯ ವಿಷಯವಾಗಿಯೂ ಯೇಸುವನ್ನು ಕೇಳಿದನು.
20 ಯೇಸು ಪ್ರತ್ಯುತ್ತರವಾಗಿ ಅವನಿಗೆ--ನಾನು ಬಹಿರಂಗವಾಗಿ ಲೋಕದ ಮುಂದೆ ಮಾತನಾಡಿದ್ದೇನೆ; ಯೆಹೂದ್ಯರು ಯಾವಾಗಲೂ ಕೂಡುವಂಥ ಸಭಾಮಂದಿರದಲ್ಲಿಯೂ ದೇವಾಲಯದಲ್ಲಿಯೂ ನಾನು

ಉಪದೇಶಿಸಿದ್ದೆನು; ಗುಪ್ತವಾಗಿ ಯಾವದನ್ನೂ
ನಾನು ಹೇಳಲಿಲ್ಲ.
21 ನೀನು ನನ್ನನ್ನು ಯಾಕೆ ವಿಚಾರಿಸುತ್ತೀ?
ನಾನು ಅವರಿಗೆ ಏನು ಹೇಳಿದ್ದೇನೆಂದು
ಕೇಳಿದವರನ್ನು ವಿಚಾರಿಸು ಇಗೋ, ನಾನು
ಹೇಳಿದ್ದು ಅವರಿಗೆ ತಿಳಿ ದದೆ ಅಂದನು.
22 ಆತನು ಹೀಗೆ ಮಾತನಾಡಿದಾಗ ಹತ್ತಿರ
ನಿಂತಿದ್ದ ಅಧಿಕಾರಿಗಳಲ್ಲಿ ಒಬ್ಬನು ತನ್ನ ಅಂಗೈ
ಯಿಂದ ಯೇಸುವನ್ನು ಹೊಡೆದು--ನೀನು
ಮಹಾ ಯಾಜಕನಿಗೆ ಹೀಗೆ ಉತ್ತರ
ಕೊಡುತ್ತೀಯೋ ಅಂದನು.
23 ಯೇಸು ಅವನಿಗೆ--ನಾನು ಕೆಟ್ಟದ್ದನ್ನು
ಮಾಡಿದ್ದರೆ ಕೆಟ್ಟದ್ದರ ವಿಷಯವಾಗಿ

ಸಾಕ್ಷಿಕೊಡು; ಒಳ್ಳೇದನ್ನು ಮಾತನಾಡಿದ್ದರೆ
ನೀನು ನನ್ನನ್ನು ಯಾಕೆ ಹೊಡೆಯುತ್ತೀ
ಅಂದನು.
24 ಅನ್ನನು ಆತನನ್ನು ಕಟ್ಟಿಸಿ ಮಹಾ
ಯಾಜಕನಾದ ಕಾಯಫನ ಬಳಿಗೆ
ಕಳುಹಿಸಿದನು.
25 ತರುವಾಯ ಸೀಮೋನ ಪೇತ್ರನು
ಚಳಿಕಾಯಿಸಿ ಕೊಳ್ಳುತ್ತಾ ನಿಂತಿದ್ದನು;
ಆದದರಿಂದ ಅವರು ಅವ ನಿಗೆ--ನೀನು ಸಹ
ಆತನ ಶಿಷ್ಯರಲ್ಲಿ ಒಬ್ಬನಲ್ಲವೇ ಎಂದು
ಅವನನ್ನು ಕೇಳಿದರು. ಅದಕ್ಕೆ ಅವನು ಅದನ್ನು
ಅಲ್ಲಗಳೆದು--ನಾನಲ್ಲ ಅಂದನು.
26 ಮಹಾಯಾಜ ಕನ ಆಳುಗಳಲ್ಲಿ ಪೇತ್ರನು

ಕಿವಿ ಕತ್ತರಿಸಿದವನ ಬಂಧು ವಾಗಿದ್ದ ಒಬ್ಬನು--
ನಾನು ನಿನ್ನನ್ನು ತೋಟದಲ್ಲಿ ಆತನ ಸಂಗಡ
ನೋಡಲಿಲ್ಲವೋ ಅಂದನು.
27 ಪೇತ್ರನು ತಿರಿಗಿ ಅಲ್ಲಗಳೆದನು; ಆಗ
ಕೂಡಲೆ ಹುಂಜ ಕೂಗಿತು.
28 ಆಮೇಲೆ ಅವರು ಯೇಸುವನ್ನು
ಕಾಯಫನ ಬಳಿಯಿಂದ ನ್ಯಾಯಾಲಯಕ್ಕೆ
ಸಾಗಿಸಿಕೊಂಡು ಹೋದರು. ಆಗ
ಮುಂಜಾನೆಯಾಗಿತ್ತು. ತಾವು ಮೈಲಿಗೆಯಾಗಿ
ಪಸ್ಕದ ಊಟ ಮಾಡುವದಕ್ಕೆ
ಅಡ್ಡಿಯಾದೀತೆಂದು ಅವರು
ನ್ಯಾಯಾಲಯದ ಒಳಗೆ ಹೋಗಲಿಲ್ಲ.
29 ಆಗ ಪಿಲಾತನು ಹೊರಗೆ ಅವರ ಬಳಿಗೆ

ಹೋಗಿ ನೀವು ಈ ಮನುಷ್ಯನ ಮೇಲೆ ಏನು
ದೂರು ತರುತ್ತೀರಿ ಎಂದು ಕೇಳಿದ್ದಕ್ಕೆ
30 ಅವರು ಪ್ರತ್ಯುತ್ತರವಾಗಿ ಅವನಿಗೆ--ಇವನು
ದುಷ್ಕರ್ಮಿಯಲ್ಲ ದಿದ್ದರೆ ನಾವು ಇವನನ್ನು
ನಿನಗೆ ಒಪ್ಪಿಸಿಕೊಡುತ್ತಿರಲಿಲ ಎಂದು
ಹೇಳಿದರು.
31 ಆಗ ಪಿಲಾತನು ಅವರಿಗೆ--ನೀವೇ
ಆತನನ್ನು ತಕ್ಕೊಂಡು ನಿಮ್ಮ
ನ್ಯಾಯಪ್ರಮಾಣದ ಪ್ರಕಾರ ಆತನಿಗೆ
ನ್ಯಾಯತೀರಿಸಿರಿ ಅಂದನು. ಅದಕ್ಕೆ
ಯೆಹೂದ್ಯರು ಅವನಿಗೆ--ನಾವು ಯಾವ
ಮನುಷ್ಯ ನನ್ನೂ ಕೊಲ್ಲಿಸುವದಕ್ಕೆ ನಮಗೆ
ನ್ಯಾಯವಲ್ಲ ಎಂದು ಹೇಳಿದರು.

32 ಹೀಗೆ ಯೇಸು ತಾನು ಎಂಥಾ ಸಾವು
ಸಾಯುವನೆಂದು ಸೂಚಿಸಿ ಹೇಳಿದ ಮಾತು
ಈಡೇರಿತು.
33 ತರುವಾಯ ಪಿಲಾತನು ತಿರಿಗಿ
ನ್ಯಾಯಾಲಯ ದೊಳಗೆ ಪ್ರವೇಶಿಸಿ
ಯೇಸುವನ್ನು ಕರೆದು ಆತ ನಿಗೆ--ನೀನು
ಯೆಹೂದ್ಯರ ಅರಸನೋ ಎಂದು ಕೇಳಿದನು.
34 ಅದಕ್ಕೆ ಯೇಸು ಪ್ರತ್ಯುತ್ತರವಾಗಿ ಅವನಿಗೆ--
ನಿನ್ನಷ್ಟಕ್ಕೆ ನೀನೇ ಇದನ್ನು ಹೇಳುತ್ತೀಯೋ?
ಇಲ್ಲವೆ ಬೇರೆಯವರು ನನ್ನ ವಿಷಯದಲ್ಲಿ
ನಿನಗೆ ಹೇಳಿ ದ್ದಾರೋ? ಅಂದನು.
35 ಪಿಲಾತನು ಪ್ರತ್ಯುತ್ತರ ವಾಗಿ--ನಾನೇನು
ಯೆಹೂದ್ಯನೋ? ನಿನ್ನ ಸ್ವಂತ ಜನಾಂಗವೂ

ಪ್ರಧಾನಯಾಜಕರೂ ನಿನ್ನನ್ನು ನನಗೆ ಒಪ್ಪಿಸಿದ್ದಾರೆ; ನೀನು ಏನು ಮಾಡಿದ್ದೀ ಎಂದು ಕೇಳಿ ದನು.

36 ಯೇಸು ಪ್ರತ್ಯುತ್ತರವಾಗಿ--ನನ್ನ ರಾಜ್ಯವು ಈ ಲೋಕದ್ದಲ್ಲ, ನನ್ನ ರಾಜ್ಯವು ಈ ಲೋಕದ್ದಾಗಿದ್ದರೆ ನಾನು ಯೆಹೂದ್ಯರಿಗೆ ಒಪ್ಪಿಸಲ್ಪಡದ ಹಾಗೆ ನನ್ನ ಸೇವಕರು ಕಾದಾಡುತ್ತಿದ್ದರು; ಆದರೆ ಈಗ ನನ್ನ ರಾಜ್ಯವು ಇಲ್ಲಿಯದಲ್ಲ ಅಂದನು.

37 ಆದದರಿಂದ ಪಿಲಾತನು ಆತನಿಗೆ--ಹಾಗಾದರೆ ನೀನು ಅರಸನೋ ಅನ್ನಲು ಯೇಸು ಪ್ರತ್ಯುತ್ತರವಾಗಿ--ನಾನು ಅರಸ ನಾಗಿದ್ದೇನೆಂದು ನೀನೇ ಹೇಳುತ್ತೀ. ನಾನು

ಸತ್ಯಕ್ಕೆ ಸಾಕ್ಷಿಕೊಡುವದಕ್ಕೋಸ್ಕರ ಹುಟ್ಟಿ ಅದಕ್ಕೋಸ್ಕರವೇ ಲೋಕಕ್ಕೆ ಬಂದೆನು; ಸತ್ಯಕ್ಕೆ ಸಂಬಂಧಿಸಿದ ಪ್ರತಿಯೊಬ್ಬನು ನನ್ನ ಸ್ವರವನು
38 ಪಿಲಾತನು ಆತನಿಗೆ--ಸತ್ಯ ಅಂದರೇನು? ಅಂದನು. ಅವನು ಇದನ್ನು ಕೇಳಿದ ಮೇಲೆ ತಿರಿಗಿ ಯೆಹೂದ್ಯರ ಬಳಿಗೆ ಹೊರಗೆ ಬಂದು ಅವರಿಗೆ--ನಾನು ಆತನಲ್ಲಿ ಯಾವ ಅಪರಾಧವನ್ನೂ ಕಾಣಲಿಲ್ಲ.
39 ಆದರೆ ಪಸ್ಕ ದಲ್ಲಿ ನಾನು ನಿಮಗೆ ಒಬ್ಬನನ್ನು ಬಿಟ್ಟುಕೊಡುವ ಪದ್ಧತಿ ಉಂಟಷ್ಟೆ; ಆದಕಾರಣ ನಾನು ಯೆಹೂದ್ಯರ ಅರಸನನ್ನು ಬಿಟ್ಟುಕೊಡುವದು ನಿಮಗೆ ಇಷ್ಟವೋ ಎಂದು ಕೇಳಿ ದನು.

40 ಅದಕ್ಕೆ ಅವರೆಲ್ಲರೂ ತಿರಿಗಿ--ಈ ಮನುಷ್ಯ
ನನ್ನಲ್ಲ; ಆದರೆ ಬರಬ್ಬನನ್ನು ಬಿಟ್ಟು ಕೊಡು
ಎಂದು ಕೂಗಿಕೊಂಡರು. ಈ ಬರಬ್ಬನು
ಕಳ್ಳನಾಗಿದ್ದನು.

ಅಧ್ಯಾಯ 19

1 ಆಗ ಪಿಲಾತನು ಯೇಸುವನ್ನು
ತೆಗೆದುಕೊಂಡು ಆತನನ್ನು ಕೊರಡೆ ಯಿಂದ
ಹೊಡಿಸಿದನು.
2 ಸೈನಿಕರು ಮುಳ್ಳಿನ ಕಿರೀಟವನ್ನು ಹೆಣೆದು
ಆತನ ತಲೆಯ ಮೇಲೆ ಇಟ್ಟು ಊದಾ
ಬಣ್ಣದ ನಿಲುವಂಗಿಯನ್ನು ತೊಡಿಸಿ--

3 ಯೆಹೂದ್ಯರ ಅರಸನೇ, ವಂದನೆ! ಎಂದು
ಹೇಳಿ ತಮ್ಮ ಕೈಗಳಿಂದ ಆತನನ್ನು ಹೊಡೆದರು.
4 ಆದದರಿಂದ ಪಿಲಾತನು ತಿರಿಗಿ ಹೊರಕ್ಕೆ
ಹೋಗಿ ಅವರಿಗೆ--ಇಗೋ, ನಾನು ಆತನಲ್ಲಿ
ಯಾವ ಅಪರಾಧವನ್ನೂ ಕಾಣಲಿಲ್ಲವೆಂದು
ನೀವು ತಿಳಿದುಕೊಳ್ಳುವ ಹಾಗೆ ಆತನನ್ನು
ನಿಮ್ಮ ಮುಂದೆ ತರುತ್ತೇನೆ ಅಂದನು.
5 ಆಗ ಯೇಸು ಮುಳ್ಳಿನ ಕಿರೀಟವನ್ನು
ಮತ್ತು ಊದಾಬಣ್ಣದ ನಿಲುವಂಗಿಯನ್ನು
ಧರಿಸಿಕೊಂಡವನಾಗಿ ಹೊರಗೆ ಬರಲು
ಪಿಲಾತನು ಅವರಿಗೆ--ಇಗೋ, ಈ
ಮನುಷ್ಯನು! ಅಂದನು.
6 ಪ್ರಧಾನಯಾಜಕರೂ ಅಧಿಕಾರಿಗಳೂ

ಆತನನ್ನು ನೋಡಿದಾಗ--ಅವನನ್ನು ಶಿಲುಬೆಗೆ ಹಾಕಿಸು, ಅವ ನನ್ನು ಶಿಲುಬೆಗೆ ಹಾಕಿಸು ಎಂದು ಕೂಗಿದರು. ಅದಕ್ಕೆ ಪಿಲಾತನು ಅವರಿಗೆ--ನೀವೇ ಆತನನ್ನು ತಕ್ಕೊಂಡು ಹೋಗಿ ಶಿಲುಬೆಗೆ ಹಾಕಿರಿ; ಯಾಕಂದರೆ ನಾನು ಆತನಲ್ಲಿ ಯಾವ ಅಪರಾಧವನ್ನೂ ಕಾಣಲಿಲ್ಲ ಅಂದನು.
7 ಯೆಹೂದ್ಯರು ಪ್ರತ್ಯುತ್ತರವಾಗಿ ಅವ ನಿಗೆ--
ನಮ್ಮಲ್ಲಿ ಒಂದು ನ್ಯಾಯಪ್ರಮಾಣವಿದೆ ಮತ್ತು ನಮ್ಮ ಆ ನ್ಯಾಯಪ್ರಮಾಣದ ಪ್ರಕಾರ ಅವನು ಸಾಯಲೇಬೇಕು; ಯಾಕಂದರೆ ಅವನು ತನ್ನನ್ನು ದೇವರಮಗನೆಂದು ಮಾಡಿಕೊಂಡಿದ್ದಾನೆ ಅಂದರು.

8 ಪಿಲಾತನು ಈ ಮಾತನ್ನು ಕೇಳಿದಾಗ
ಇನ್ನೂ ಬಹಳವಾಗಿ ಭಯಪಟ್ಟನು.
9 ತಿರಿಗಿ ನ್ಯಾಯಾಲಯ ದೊಳಗೆ ಹೋಗಿ
ಯೇಸುವಿಗೆ--ನೀನು ಎಲ್ಲಿಂದ ಬಂದವನು
ಎಂದು ಆತನನ್ನು ಕೇಳಿದನು. ಆದರೆ ಯೇಸು
ಅವನಿಗೆ ಉತ್ತರಕೊಡಲಿಲ್ಲ.
10 ಆಗ ಪಿಲಾತನು ಆತನಿಗೆ--ನೀನು ನನ್ನ
ಸಂಗಡ ಮಾತ ನಾಡುವದಿಲ್ಲವೋ? ನಾನು
ನಿನ್ನನ್ನು ಶಿಲುಬೆಗೆ ಹಾಕಿಸುವದಕ್ಕೂ ನಿನ್ನನ್ನು
ಬಿಡಿಸುವದಕ್ಕೂ ನನಗೆ ಅಧಿಕಾರವು
ಉಂಟೆಂದು ನಿನಗೆ ತಿಳಿಯುವದಿಲ್ಲವೋ
ಎಂದು ಕೇಳಿದನು.
11 ಅದಕ್ಕೆ ಯೇಸು--ಮೇಲಿನಿಂದ ನಿನಗೆ

ಕೊಡಲ್ಪಡದಿದ್ದರೆ ನನ್ನ ಮೇಲೆ ನಿನಗೆ ಯಾವ ಅಧಿಕಾರವೂ ಇರುತ್ತಿರಲಿಲ್ಲ. ಆದಕಾರಣ ನನ್ನನ್ನು ನಿನಗೆ ಒಪ್ಪಿಸಿದವನಿಗೆ ಹೆಚ್ಚಾದ ಪಾಪ ಉಂಟು ಎಂದು ಉತ್ತರ ಕೊಟ್ಟನು.

12 ಅಂದಿನಿಂದ ಪಿಲಾತನು ಆತನನ್ನು ಬಿಡಿಸಲು ಪ್ರಯತ್ನಪಟ್ಟನು. ಆದರೆ ಯೆಹೂದ್ಯರು--ನೀನು ಈ ಮನುಷ್ಯನನ್ನು ಹೋಗಗೊಡಿಸಿದರೆ ಕೈಸರನಿಗೆ ಸ್ನೇಹಿತನಲ್ಲ; ತನ್ನನ್ನು ಅರಸನನ್ನಾಗಿ ಮಾಡಿಕೊಳ್ಳು ವವನು ಕೈಸರನಿಗೆ ವಿರೋಧವಾಗಿ ಮಾತನಾಡುತ್ತಾನೆ ಎಂದು ಕೂಗಿ ಹೇಳಿದರು.

13 ಆದದರಿಂದ ಪಿಲಾತನು ಆ ಮಾತನ್ನು ಕೇಳಿ ಯೇಸುವನ್ನು ಹೊರಗೆ ಕರ ಕೊಂಡು

ಬಂದು ಇಬ್ರಿಯ ಮಾತಿನಲ್ಲಿ ಗಬ್ಬಥಾ ಎನಿಸಿಕೊಳ್ಳುವ ಕಲ್ಲು ಹಾಸಿದ ಕಟ್ಟೆ ಎಂದು ಕರೆಯಲ್ಪಟ್ಟ ಸ್ಥಳದಲ್ಲಿ ನ್ಯಾಯಾಸನದ ಮೇಲೆ ಕೂತುಕೊಂಡನು.

14 ಅದು ಪಸ್ಕಕ್ಕೆ ಸಿದ್ಧಮಾಡುವ ದಿನದಲ್ಲಿ ಸುಮಾರು ಆರನೇ ತಾಸಾಗಿತ್ತು; ಅವನು ಯೆಹೂದ್ಯರಿಗೆ--ಇಗೋ, ನಿಮ್ಮ ಅರಸನು ಅಂದನು.

15 ಆದರೆ ಅವರು--ತೆಗೆದುಹಾಕು, ತೆಗೆದುಹಾಕು, ಅವನನ್ನು ಶಿಲುಬೆಗೆ ಹಾಕು ಅಂದರು. ಅದಕ್ಕೆ ಪಿಲಾತನು ಅವರಿಗೆ--ನಿಮ್ಮ ಅರಸನನ್ನು ಶಿಲುಬೆಗೆ ಹಾಕಲೋ ಅಂದಾಗ ಪ್ರಧಾನಯಾಜಕರು--ಕೈಸರನೇ ಹೊರತು

ನಮಗೆ ಬೇರೆ ಅರಸನಿಲ್ಲ ಎಂದು ಉತ್ತರ
ಕೊಟ್ಟರು.
16 ಆಗ ಅವನು ಯೇಸುವನ್ನು ಶಿಲುಬೆಗೆ
ಹಾಕಿಸುವದಕ್ಕೆ ಅವರಿಗೆ ಒಪ್ಪಿಸಲಾಗಿ ಅವರು
ಆತನನ್ನು ಸಾಗಿಸಿಕೊಂಡು ಹೋದರು.
17 ಆತನು ತನ್ನ ಶಿಲುಬೆಯನ್ನು
ಹೊತ್ತುಕೊಂಡು ಕಪಾಲವೆಂದು ಕರೆಯಲ್ಪಟ್ಟ
ಸ್ಥಳಕ್ಕೆ ಹೋದನು. ಅದು ಇಬ್ರಿಯ
ಭಾಷೆಯಲ್ಲಿ ಗೊಲ್ಗೊಥಾ (ಬುರುಡೆಗಳ ಸ್ಥಳ)
ಎಂದು ಕರೆಯಲ್ಪಡುತ್ತದೆ.
18 ಅಲ್ಲಿ ಇಬ್ಬರು ಅಂದರೆ ಆ
ಕಡೆಗೊಬ್ಬನನ್ನೂ ಈ ಕಡೆಗೊಬ್ಬನನ್ನು ಮಧ್ಯೆ
ಯೇಸುವನ್ನೂ ಇರಿಸಿ ಆತನೊಂದಿಗೆ

ಶಿಲುಬೆಗೆ ಹಾಕಿದರು.
19 ಇದಲ್ಲದೆ ಪಿಲಾತನು ಒಂದು
ಶಿರೋನಾಮವನ್ನು ಬರೆಯಿಸಿ ಅದನ್ನು
ಶಿಲುಬೆಯ ಮೇಲೆ ಇರಿಸಿದನು. ಆ ಬರಹವು
ಏನಂದರೆ--ಯೆಹೂದ್ಯರ ಅರಸನಾದ
ನಜರೇತಿನ ಯೇಸು ಎಂಬದೇ.
20 ಈ ಶಿರೋನಾಮ ವನ್ನು ಯೆಹೂದ್ಯರಲ್ಲಿ
ಅನೇಕರು ಓದಿದರು. ಯೇಸು ಶಿಲುಬೆಗೆ
ಹಾಕಲ್ಪಟ್ಟ ಆ ಸ್ಥಳವು ಆ ಪಟ್ಟಣಕ್ಕೆ
ಸವಿಾಪವಾಗಿತ್ತು. ಇದು ಇಬ್ರಿಯ ಗ್ರೀಕ್
ಮತ್ತು ಲ್ಯಾಟಿನ್ ಭಾಷೆಗಳಲ್ಲಿ
ಬರೆಯಲ್ಪಟ್ಟಿತ್ತು.
21 ಹೀಗಿರಲಾಗಿ ಯೆಹೂದ್ಯರ

ಪ್ರಧಾನಯಾಜಕರು ಪಿಲಾತನಿಗೆ--ಯೆಹೂದ್ಯರ ಅರಸನೆಂದು ಬರೆಯಬೇಡ; ಆದರೆ--ನಾನೇ ಯೆಹೂದ್ಯರ ಅರಸನಾಗಿದ್ದೇನೆ ಎಂದು ಅವನು ಹೇಳಿದನು ಎಂದು ಬರೆ ಅಂದರು.
22 ಪಿಲಾತನು ಪ್ರತ್ಯುತ್ತರವಾಗಿ--ನಾನು ಬರೆದದ್ದು ಬರೆದಾಯಿತು ಅಂದನು.
23 ಸೈನಿಕರು ಯೇಸುವನ್ನು ಶಿಲುಬೆಗೆ ಹಾಕಿದ ಮೇಲೆ ಆತನ ವಸ್ತ್ರಗಳನ್ನು ತೆಗೆದು ಪ್ರತಿಯೊಬ್ಬ ಸೈನಿಕ ನಿಗೆ ಒಂದೊಂದು ಭಾಗದಂತೆ ನಾಲ್ಕು ಭಾಗಗಳನ್ನಾಗಿ ಮಾಡಿಕೊಂಡರು. ಆತನ ಮೇಲಂಗಿಯನ್ನು ಸಹ ತಕ್ಕೊಂಡರು; ಆದರೆ ಆ ಅಂಗಿಯು

ಹೊಲಿಗೆ ಇಲ್ಲದೆ ಮೇಲಿನಿಂದ ಉದ್ದಕ್ಕೂ ನೇಯ್ದದ್ದಾಗಿತ್ತು.
24 ಆದದ ರಿಂದ ಅವರು--ನಾವು ಅದನ್ನು ಹರಿಯುವದು ಬೇಡ; ಆದರೆ ಅದು ಯಾರಿಗಾಗುವದೋ ಎಂದು ಅದಕ್ಕೋಸ್ಕರ ಚೀಟು ಹಾಕಿಕೊಳ್ಳೋಣ ಎಂದು ತಮ್ಮುತಮ್ಮೊಳಗೆ ಮಾತನಾಡಿಕೊಂಡರು; ಹೀಗೆ--ನನ್ನ ಬಟ್ಟೆಯನ್ನು ಅವರು ತಮ್ಮೊಳಗೆ ಪಾಲುಮಾಡಿ ಕೊಂಡರು; ನನ್ನ ಮೇಲಂಗಿಗೋಸ್ಕರ ಚೀಟು ಹಾಕಿ ದರ
25 ಆಗ ಯೇಸುವಿನ ಶಿಲುಬೆಯ ಬಳಿಯಲ್ಲಿ ಆತನ ತಾಯಿಯೂ ಆತನ ತಾಯಿಯ ಸಹೋದರಿಯೂ ಕ್ಲೋಫನ

ಹೆಂಡತಿಯಾದ ಮರಿಯಳೂ ಮಗ್ದಲದ ಮರಿಯಳೂ ನಿಂತಿದ್ದರು.
26 ತನ್ನ ತಾಯಿಯು ಮತ್ತು ತಾನು ಪ್ರೀತಿಸಿದ ಶಿಷ್ಯನು ಹತ್ತಿರದಲ್ಲಿ ನಿಂತಿರುವದನ್ನು ಯೇಸು ನೋಡಿ ತನ್ನ ತಾಯಿಗೆ--ಸ್ತ್ರೀಯೇ, ಇಗೋ, ನಿನ್ನ ಮಗನು ಅಂದನು.
27 ಆಮೇಲೆ ಆತನು ಆ ಶಿಷ್ಯನಿಗೆ--ಇಗೋ, ನಿನ್ನ ತಾಯಿಯು ಅಂದನು. ಆ ಗಳಿಗೆಯಿಂದ ಆ ಶಿಷ್ಯನು ಆಕೆಯನ್ನು ತನ್ನ ಸ್ವಂತ ಮನೆಯಲ್ಲಿ ಸೇರಿಸಿಕೊಂಡನು.
28 ಇದಾದ ಮೇಲೆ ಯೇಸು ಆಗ ಎಲ್ಲವೂ ಪೂರೈಸಲ್ಪಟ್ಟಿತೆಂದು ತಿಳಿದು ಬರಹವು ನೆರವೇರು ವಂತೆ--ನನಗೆ ನೀರಡಿಕೆಯಾಗಿದೆ

ಅಂದನು.
29 ಆಗ ಅಲ್ಲಿ ಹುಳಿರಸ ತುಂಬಿದ
ಪಾತ್ರೆಯಿತ್ತು; ಅವರು ಸ್ಪಂಜನ್ನು
ಹುಳಿರಸದಿಂದ ತುಂಬಿಸಿ ಹಿಸ್ಸೋಪಿಗೆ ಸಿಕ್ಕಿಸಿ
ಆತನ ಬಾಯಿಗೆ ಇಟ್ಟರು.
30 ಯೇಸು ಆ ಹುಳಿರಸವನ್ನು ತಕ್ಕೊಂಡ
ಮೇಲೆ--ತೀರಿತು ಎಂದು ಹೇಳಿ ತನ್ನ
ತಲೆಯನ್ನು ಬಾಗಿಸಿ ಆತ್ಮವನ್ನು
ಒಪ್ಪಿಸಿಕೊಟ್ಟನು.
31 ಅದು ಸಿದ್ಧತೆಯ ದಿನವಾದದ್ದರಿಂದ
ಸಬ್ಬತ್ ದಿನದಲ್ಲಿ ದೇಹಗಳು ಶಿಲುಬೆಯ
ಮೇಲೆ ಇರಬಾರ ದೆಂದು ಅವರ
ಕಾಲುಗಳನ್ನು ಮುರಿದು ಅವರನ್ನು

ತೆಗೆದುಬಿಡಬೇಕೆಂದು ಯೆಹೂದ್ಯರು
ಪಿಲಾತನನ್ನು ಬೇಡಿಕೊಂಡರು. (ಯಾಕಂದರೆ
ಆ ಸಬ್ಬತ್‌ದಿನವು ವಿಶೇಷವಾದ ದಿನವಾಗಿತ್ತು).
32 ಆಗ ಸೈನಿಕರು ಬಂದು ಆತನ
ಜೊತೆಯಲ್ಲಿ ಶಿಲುಬೆಗೆ ಹಾಕಲ್ಪಟ್ಟಿದ್ದ
ಮೊದಲನೆಯವನ ಕಾಲುಗಳನ್ನೂ
ಮತ್ತೊಬ್ಬನ ಕಾಲುಗಳನ್ನೂ ಮುರಿದರು.
33 ಆದರೆ ಅವರು ಯೇಸುವಿನ ಬಳಿಗೆ
ಬಂದಾಗ ಆತನು ಆಗಲೇ ಸತ್ತಿರುವದನ್ನು
ಕಂಡು ಆತನ ಕಾಲುಗಳನ್ನು ಮುರಿ ಯಲಿಲ್ಲ.
34 ಆದರೆ ಸೈನಿಕರಲ್ಲಿ ಒಬ್ಬನು ಈಟಿಯಿಂದ
ಆತನ ಪಕ್ಕೆಯನ್ನು ತಿವಿದನು; ಕೂಡಲೆ
ರಕ್ತವೂ ನೀರೂ ಹೊರಗೆ ಬಂತು.

35 ಅದನ್ನು ನೋಡಿದವನೇ ಸಾಕ್ಷಿ
ಕೊಟ್ಟಿದ್ದಾನೆ. ಅವನ ಸಾಕ್ಷಿಯು ಸತ್ಯವೇ;
ನೀವು ನಂಬುವಂತೆ ಅವನು ಹೇಳುವದು
ಸತ್ಯವೆಂದು ಅವನು ಬಲ್ಲನು.
36 ಯಾಕಂದರೆ--ಆತನ ಒಂದು
ಎಲುಬಾದರೂ ಮುರಿಯಲ್ಪಡಬಾರದು
ಎಂಬ ಬರಹವು ನೆರವೇರುವಂತೆ ಇವುಗಳು
ಸಂಭವಿಸಿದವು.
37 ತಿರಿಗಿ ಮತ್ತೊಂದು ಬರಹವು--ಅವರು
ತಾವು ಇರಿದವನನ್ನು ನೋಡುವರು ಎಂದು
ಹೇಳುತ್ತದೆ.
38 ತರುವಾಯ ಯೆಹೂದ್ಯರ ಭಯದ
ನಿಮಿತ್ತ ದಿಂದ ಗುಪ್ತವಾಗಿ ಯೇಸುವಿನ

ಶಿಷ್ಯನಾಗಿದ್ದ ಅರಿಮಥಾ ಯದ ಯೋಸೇಫನು ಯೇಸುವಿನ ದೇಹವನ್ನು ತಾನು ತೆಗೆದುಕೊಂಡು ಹೋಗುವಂತೆ ಪಿಲಾತನನ್ನು ಬೇಡಿ ಕೊಂಡನು. ಆಗ ಪಿಲಾತನು ಅಪ್ಪಣೆಕೊಡಲು ಅವನು ಬಂದು ಆತನ ದೇಹವನ್ನು ತೆಗೆದುಕೊಂಡು
39 ಇದಲ್ಲದೆ ಮೊದಲು ಒಂದು ರಾತ್ರಿ ಯಲ್ಲಿ ಯೇಸುವಿನ ಬಳಿಗೆ ಬಂದಿದ್ದ ನಿಕೊದೇಮನು ಸಹ ಬೆರಸಿದ ರಕ್ತಬೋಳ ಅಗರುಗಳನ್ನು ನೂರು ಸೇರು ತೂಕದಷ್ಟು ತಕ್ಕೊಂಡು ಅಲ್ಲಿಗೆ ಬಂದನು.
40 ಆಗ ಅವರು ಯೇಸುವಿನ ದೇಹವನ್ನು ತಕ್ಕೊಂಡು ಯೆಹೂದ್ಯರಲ್ಲಿ ಹೂಣಿಡುವ

ಪದ್ಧತಿಯ ಪ್ರಕಾರ ಅದನ್ನು ಸುಗಂಧದ್ರವ್ಯಗಳೊಂದಿಗೆ ನಾರು ಬಟ್ಟೆಗಳಲ್ಲಿ ಸುತ್ತಿದರು.
41 ಆತನು ಶಿಲುಬೆಗೆ ಹಾಕಲ್ಪಟ್ಟ ಸ್ಥಳದಲ್ಲಿ ಒಂದು ತೋಟವಿತ್ತು; ಆ ತೋಟದಲ್ಲಿ ಯಾರನ್ನೂ ಇಡದೆ ಇದ್ದ ಒಂದು ಸಮಾಧಿಯು ಇತ್ತು.
42 ಆ ದಿನವು ಯೆಹೂದ್ಯರ ಸಿದ್ಧತೆಯ ದಿನವಾದದ್ದರಿಂದ ಅವರು ಯೇಸುವನ್ನು ಸಮಾಧಿಯಲ್ಲಿ ಇಟ್ಟರು. ಯಾಕಂದರೆ ಆ ಸಮಾಧಿಯು ಸಮೀಪದಲ್ಲಿತ್ತು.

ಅಧ್ಯಾಯ 20

1 ವಾರದ ಮೊದಲನೆಯ ದಿನದಲ್ಲಿ ಮಗ್ದಲದ
ಮರಿಯಳು ಬೆಳಿಗ್ಗೆ ಇನ್ನೂ ಕತ್ತಲಿರುವಾಗಲೇ
ಸಮಾಧಿಯ ಬಳಿಗೆ ಬಂದು ಸಮಾಧಿಯಿಂದ
ಕಲ್ಲು ತೆಗೆದುಹಾಕಲ್ಪಟ್ಟಿರುವದನ್ನು ಕಂಡಳು.
2 ಆಗ ಆಕೆಯು ಸೀಮೋನ ಪೇತ್ರನ
ಬಳಿಗೂ ಯೇಸು ಪ್ರೀತಿಸಿದ ಆ ಬೇರೆ ಶಿಷ್ಯನ
ಬಳಿಗೂ ಓಡಿಬಂದು ಅವರಿಗೆ--ಕರ್ತನನ್ನು
ಅವರು ಸಮಾಧಿ ಯೊಳಗಿಂದ
ತೆಗೆದುಕೊಂಡು ಹೋಗಿದ್ದಾರೆ; ಅವರು
ಆತನನ್ನು ಎಲ್ಲಿ ಇಟ್ಟಿದ್ದಾರೋ ನಮಗೆ
ಗೊತ್ತಿಲ್ಲ ಅಂದಳು.

3 ಆದದರಿಂದ ಪೇತ್ರನೂ ಮತ್ತೊಬ್ಬ ಶಿಷ್ಯನೂ
ಹೊರಟು ಸಮಾಧಿಗೆ ಬಂದರು.
4 ಹೀಗೆ ಅವರಿಬ್ಬರೂ ಜೊತೆಯಾಗಿ
ಓಡಿದರು; ಆ ಬೇರೆ ಶಿಷ್ಯನು ಪೇತ್ರನಿಗಿಂತ
ಮುಂದೆ ಓಡಿ ಮೊದಲು ಸಮಾಧಿಗೆ
ಬಂದನು.
5 ಅವನು ಬೊಗ್ಗಿಕೊಂಡು ಒಳಗೆ
ನೋಡಿದಾಗ ನಾರುಬಟ್ಟೆಗಳು
ಬಿದ್ದಿರುವದನ್ನು ಕಂಡನು. ಆದಾಗ್ಯೂ ಅವನು
ಒಳಗೆ ಹೋಗಲಿಲ್ಲ.
6 ಆಮೇಲೆ ಸೀಮೋನ ಪೇತ್ರನು ಅವನ
ಹಿಂದೆ ಬಂದು ಸಮಾಧಿಯೊಳಕ್ಕೆ ಹೋಗಿ
ನಾರುಬಟ್ಟೆಗಳು ಬಿದ್ದಿರುವದನ್ನೂ

7 ಆತನ ತಲೆಯ ಮೇಲಿದ್ದ ಕೈವಸ್ತ್ರವು
ನಾರುಬಟ್ಟೆಗಳೊಂದಿಗೆ ಇರದೆ ಸುತ್ತಿ ಒಂದು
ಕಡೆಯಲ್ಲಿ ಬೇರೆ ಇರುವದನ್ನೂ ಕಂಡನು.
8 ಆಗ ಮೊದಲು ಸಮಾಧಿಗೆ ಬಂದ ಆ ಬೇರೆ
ಶಿಷ್ಯನು ಸಹ ಒಳಗೆ ಹೋಗಿ ನೋಡಿ
ನಂಬಿದನು.
9 ಯಾಕಂದರೆ ಆತನು ಸತ್ತವರೊಳಗಿಂದ
ತಿರಿಗಿ ಎದ್ದೇಳುವದು ಅಗತ್ಯವೆಂಬ ಬರಹವು
ಅವರಿಗೆ ಇನ್ನೂ ತಿಳಿದಿರಲಿಲ್ಲ.
10 ತರುವಾಯ ಆ ಶಿಷ್ಯರು ತಮ್ಮ ಸ್ವಂತ
ಮನೆಗೆ ಹೊರಟು ಹೋದರು.
11 ಆದರೆ ಮರಿಯಳು ಹೊರಗೆ
ಸಮಾಧಿಯ ಬಳಿಯಲ್ಲಿ ಅಳುತ್ತಾ ನಿಂತಿದ್ದಳು;

ಆಕೆಯು ಅಳುತ್ತಾ ಸಮಾಧಿಯೊಳಗೆ ಬೊಗ್ಗಿ ನೋಡಿದಾಗ
12 ಯೇಸು ವಿನ ದೇಹವನ್ನು ಇಟ್ಟಿದ್ದ ಸ್ಥಳದಲ್ಲಿ ಬಿಳೀವಸ್ತ್ರಗಳನ್ನು ಧರಿಸಿದ್ದ ಇಬ್ಬರು ದೂತರು, ಒಬ್ಬನು ತಲೆಯ ಕಡೆಗೂ ಮತ್ತೊಬ್ಬನು ಪಾದಗಳ ಕಡೆಗೂ, ಕೂತಿರುವದನ್ನು ಕಂಡಳು.
13 ಅವರು ಆಕೆಗೆ--ಸ್ತ್ರೀಯೇ, ನೀನು ಯಾಕೆ ಅಳುತ್ತೀ ಎಂದು ಕೇಳಲು ಆಕೆಯು ಅವರಿಗೆ--ನನ್ನ ಕರ್ತನನ್ನು ಅವರು ತೆಗೆದುಕೊಂಡು ಹೋಗಿದ್ದಾರೆ; ಆತನನ್ನು ಅವರು ಎಲ್ಲೀ ಇಟ್ಟಿದ್ದಾರೋ ನನಗೆ ಗೊತ್ತಿಲ್ಲ ಅಂದಳು.

14 ಆಕೆಯು ಹೀಗೆ ಹೇಳಿದ ಮೇಲೆ ಹಿಂದಕ್ಕೆ
ತಿರುಗಿ ಯೇಸು ನಿಂತಿರುವದನ್ನು ಕಂಡಳು;
ಆದರೆ ಆತನು ಯೇಸು ಎಂದು ಆಕೆಗೆ
ತಿಳಿಯಲಿಲ್ಲ.
15 ಯೇಸು ಆಕೆಗೆ--ಸ್ತ್ರೀಯೇ, ನೀನು
ಯಾಕೆ ಅಳುತ್ತೀ? ಯಾರನ್ನು ಹುಡುಕುತ್ತೀ
ಅನ್ನಲು ಆಕೆಯು ಆತನು
ತೋಟಗಾರನೆಂದು ನೆನಸಿ ಆತನಿಗೆ--ಅಯ್ಯಾ
ನೀನು ಆತನನ್ನು ಇಲ್ಲಿಂದ ತೆಗೆದುಕೊಂಡು
ಹೋಗಿದ್ದರೆ ಆತನನ್ನು ಎಲ್ಲಿ ಇಟ್ಟಿದ್ದೀ ಎಂದು
ನನಗೆ ಹೇಳು; ನಾನು ಆತನನ್ನು
ತೆಗೆದುಕೊಂಡು ಹೋಗುತ್ತೇ
16 ಯೇಸು ಆಕೆಗೆ--ಮರಿಯಳೇ ಅನ್ನಲು

ಆಕೆಯು ತಿರುಗಿಕೊಂಡು ಆತನಿಗೆ--ರಬ್ಬೂನಿ ಅಂದಳು,ಅಂದರೆ ಬೋಧಕನೇ ಎಂಬದು.
17 ಯೇಸು ಆಕೆಗೆ--ನನ್ನನ್ನು ಮುಟ್ಟಬೇಡ; ಯಾಕಂದರೆ ನಾನು ಇನ್ನೂ ನನ್ನ ತಂದೆಯ ಬಳಿಗೆ ಏರಿಹೋಗಲಿಲ್ಲ; ಆದರೆ ನೀನು ನನ್ನ ಸಹೋದರರರ ಬಳಿಗೆ ಹೋಗಿ ಅವ ರಿಗೆ--ನನ್ನ ತಂದೆಯೂ ನಿಮ್ಮ ತಂದೆಯೂ ನನ್ನ ದೇವರೂ ನಿಮ್ಮ ದೇವರೂ ಆಗಿರುವಾತನ ಬಳಿಗೆ ನಾನು ಏರಿಹೋಗುತ್ತೇನೆ ಎಂದು ಹೇಳು
18 ಆಗ ಮಗ್ದಲದ ಮರಿಯಳು ಬಂದು ತಾನು ಕರ್ತನನ್ನು ನೋಡಿದಳೆಂದೂ ಆತನು ಈ ಸಂಗತಿಗಳನ್ನು ತನಗೆ ಹೇಳಿದನೆಂದೂ

ಶಿಷ್ಯರಿಗೆ ಹೇಳಿದಳು.
19 ಅದೇ ವಾರದ ಮೊದಲನೆಯ ದಿನದ
ಸಾಯಂಕಾಲದಲ್ಲಿ ಯೆಹೂದ್ಯರ ಭಯದಿಂದ
ಶಿಷ್ಯರು ಕೂಡಿ ಬಂದಿದ್ದ ಮನೆಯ
ಬಾಗಲುಗಳು ಮುಚ್ಚಿದ್ದವು. ಆಗ ಯೇಸು
ಬಂದು ಅವರ ಮಧ್ಯೆ ನಿಂತು-- ನಿಮಗೆ
ಸಮಾಧಾನವಾಗಲಿ ಎಂದು ಅವರಿಗೆ ಹೇಳಿ
ದನು.
20 ಆತನು ಹೀಗೆ ಹೇಳಿದ ಮೇಲೆ ತನ್ನ
ಕೈಗಳನ್ನೂ ಪಕ್ಕೆಯನ್ನೂ ಅವರಿಗೆ
ತೋರಿಸಿದನು; ಆಗ ಶಿಷ್ಯರು ಕರ್ತನನ್ನು
ನೋಡಿ ಸಂತೋಷಪಟ್ಟರು.
21 ಯೇಸು ತಿರಿಗಿ ಅವರಿಗೆ--ನಿಮಗೆ

ಸಮಾಧಾನ ವಾಗಲಿ; ನನ್ನ ತಂದೆಯು
ನನ್ನನ್ನು ಕಳುಹಿಸಿದ ಮೇರೆಗೆ ನಾನೂ
ನಿಮ್ಮನ್ನು ಕಳುಹಿಸುತ್ತೇನೆ ಅಂದನು.
22 ಆತನು ಇದನ್ನು ಹೇಳಿ ಅವರ ಮೇಲೆ
ಊದಿ ಅವರಿಗೆ--ನೀವು ಪರಿಶುದ್ಧಾತ್ಮನನ್ನು
ಹೊಂದಿಕೊಳ್ಳಿರಿ;
23 ನೀವು ಯಾರ ಪಾಪಗಳನ್ನು
ಕ್ಷಮಿಸುತ್ತೀರೋ ಅವು ಅವರಿಗೆ
ಕ್ಷಮಿಸಲ್ಪಡುವವು; ಯಾರ ಪಾಪಗಳನ್ನು
ನೀವು ಉಳಿ ಸುತ್ತೀರೋ ಅವು ಅವರಿಗೆ
ಉಳಿಯುತ್ತವೆ ಎಂದು ಹೇಳಿದನು.
24 ಆದರೆ ಯೇಸು ಬಂದಾಗ ಹನ್ನೆರಡು
ಮಂದಿ ಯಲ್ಲಿ ಒಬ್ಬನಾದ ದಿದುಮನೆಂದು

ಕರೆಯಲ್ಪಟ್ಟ ತೋಮನು ಅವರ ಸಂಗಡ ಇರಲಿಲ್ಲ.
25 ಆದದರಿಂದ ಬೇರೆ ಶಿಷ್ಯರು ಅವನಿಗೆ--ನಾವು ಕರ್ತನನ್ನು ನೋಡಿ ದ್ದೇವೆ ಎಂದು ಹೇಳಿದರು. ಆದರೆ ಅವನು ಅವ ರಿಗೆ--ನಾನು ಆತನ ಕೈಗಳಲ್ಲಿ ಮೊಳೆಗಳ ಗುರುತನ್ನು ನೋಡಿ ಆ ಮೊಳೆಗಳ ಗುರುತಿನಲ್ಲಿ ನನ್ನ ಬೆರಳನ್ನು ಇಟ್ಟು ಆತನ ಪಕ್ಕೆಯಲ್ಲಿ ನನ್ನ ಕೈಯನ್ನು ಹಾಕದ ಹೊರತು ನಾನು ನ
26 ತಿರಿಗಿ ಎಂಟು ದಿವಸಗಳಾದ ಮೇಲೆ ಆತನ ಶಿಷ್ಯರು ಒಳಗಿದ್ದಾಗ ತೋಮನೂ ಅವರ ಸಂಗಡ ಇದ್ದನು. ಆಗ ಬಾಗಲುಗಳು ಮುಚ್ಚಿರಲಾಗಿ ಯೇಸು ಬಂದು ಮಧ್ಯದಲ್ಲಿ

ನಿಂತು--ನಿಮಗೆ ಸಮಾಧಾನ ವಾಗಲಿ
ಅಂದನು.
27 ಆಮೇಲೆ ಆತನು ತೋಮನಿಗೆ--ನಿನ್ನ
ಬೆರಳನ್ನು ಈ ಕಡೆ ಚಾಚಿ ನನ್ನ ಕೈಗಳನ್ನು
ನೋಡು; ನಿನ್ನ ಕೈಯನ್ನು ಈ ಕಡೆ ಚಾಚಿ
ನನ್ನ ಪಕ್ಕೆಯಲ್ಲಿ ಹಾಕು;
ನಂಬಿಕೆಯಿಲ್ಲದವನಾಗಿರದೆ ನಂಬುವವ
ನಾಗಿರು ಅಂದನು.
28 ತೋಮನು ಪ್ರತ್ಯುತ್ತರವಾಗಿ ಆತನಿಗೆ--ನನ್ನ
ಕರ್ತನೇ, ನನ್ನ ದೇವರೇ ಅಂದನು.
29 ಯೇಸು ಅವನಿಗೆ--ತೋಮನೇ, ನೀನು
ನನ್ನನ್ನು ನೋಡಿದ್ದರಿಂದ ನಂಬಿದ್ದೀ; ನೋಡದೆ
ನಂಬಿದವರು ಧನ್ಯರು ಅಂದನು.

30 ಯೇಸು ಇನ್ನು ಬೇರೆ ಎಷ್ಟೋ ಸೂಚಕ
ಕಾರ್ಯಗಳನ್ನು ತನ್ನ ಶಿಷ್ಯರ ಮುಂದೆ
ಮಾಡಿದ್ದು ನಿಜವೇ. ಆದರೂ ಅವುಗಳನ್ನು ಈ
ಪುಸ್ತಕದಲ್ಲಿ ಬರೆದಿರುವದಿಲ್ಲ.
31 ಆದರೆ ಯೇಸುವೇ ದೇವಕುಮಾರ ನಾದ
ಕ್ರಿಸ್ತನೆಂದು ನೀವು ನಂಬುವಂತೆಯೂ ನಂಬಿ
ಆತನ ಹೆಸರಿನ ಮೂಲಕ ಜೀವವನ್ನು
ಪಡೆದುಕೊಳ್ಳುವಂತೆಯೂ ಇವುಗಳು
ಬರೆಯಲ್ಪಟ್ಟಿವೆ.

## ಅಧ್ಯಾಯ 21

1 ಇವುಗಳಾದ ಮೇಲೆ ಯೇಸು ತಿಬೇರಿಯ

ಸಮುದ್ರದ ಬಳಿಯಲ್ಲಿ ಶಿಷ್ಯರಿಗೆ ತನ್ನನ್ನು ತಿರಿಗಿ ತೋರಿಸಿಕೊಂಡನು. ಆತನು ತನ್ನನ್ನು ತೋರಿಸಿ ಕೊಂಡ ರೀತಿ ಹೇಗಂದರೆ--
2 ಸೀಮೋನ ಪೇತ್ರನೂ ದಿದುಮನೆಂಬ ತೋಮನೂ ಗಲಿಲಾಯದ ಕಾನಾ ಊರಿನ ನತಾನಯೇಲನೂ ಜೆಬೆದಾಯನ ಮಕ್ಕಳೂ ಆತನ ಶಿಷ್ಯರಲ್ಲಿ ಇನ್ನಿಬ್ಬರೂ ಒಟ್ಟಾಗಿ ಕೂಡಿದ್ದರು.
3 ಆಗ ಸೀಮೋನ ಪೇತ್ರನು ಅವರಿಗೆ--ನಾನು ಮಿಾನು ಹಿಡಿಯುವದಕ್ಕೆ ಹೋಗುತ್ತೇನೆ ಅನ್ನಲು ಅವರು ಅವನಿಗೆ--ನಾವು ಸಹ ನಿನ್ನ ಸಂಗಡ ಬರುತ್ತೇವೆ ಅಂದರು. ಅವರು ಹೊರಟುಹೋಗಿ ಕೂಡಲೆ ದೋಣಿಯನ್ನು

ಹತ್ತಿದರು. ಆದರೆ ಆ ರಾತ್ರಿಯಲ್ಲಿ ಏನೂ
ಹಿಡಿಯಲಿಲ್ಲ.
4 ಬೆಳಗಾದಾಗ ಯೇಸು ದಡದಲ್ಲಿ
ನಿಂತಿದ್ದನು. ಆದರೆ ಆತನು ಯೇಸು ಎಂದು
ಶಿಷ್ಯರು ತಿಳಿಯಲಿಲ್ಲ.
5 ಆಗ ಯೇಸು ಅವರಿಗೆ--ಮಕ್ಕಳಿರಾ,
ನಿಮಗೆ ಊಟಕ್ಕೆ ಏನಾದರೂ ಇದೆಯೋ
ಅನ್ನಲು ಅವರು ಆತನಿಗೆ--ಇಲ್ಲವೆಂದು ಉತ್ತರ
ಕೊಟ್ಟರು.
6 ಆತನು ಅವರಿಗೆ--ದೋಣಿಯ
ಬಲಗಡೆಯಲ್ಲಿ ಬಲೆಯನ್ನು ಬೀಸಿರಿ; ಆಗ
ಸಿಕ್ಕುವದು ಅಂದನು. ಅವರು ಬೀಸಿದಾಗ
ಮೀನುಗಳ ರಾಶಿಯ ದೆಸೆಯಿಂದ ಅದನ್ನು

ಎಳೆಯಲಾರದೆ ಇದ್ದರು.
7 ಆದದರಿಂದ ಯೇಸು ಪ್ರೀತಿಸಿದ ಆ ಶಿಷ್ಯನು ಪೇತ್ರನಿಗೆ--ಆತನು ಕರ್ತನು ಅಂದನು. ಆತನು ಕರ್ತನೆಂದು ಸೀಮೋನ ಪೇತ್ರನು ಕೇಳಿ ತನ್ನ ಬೆಸ್ತರ ಅಂಗಿಯನ್ನು ಸುತ್ತಿಕೊಂಡು ಸಮುದ್ರದೊಳಗೆ ದುಮುಕಿ ದನು (ಯಾಕಂದರೆ ಅವನು ಬೆತ್ತಲೆಯಾಗಿದ್ದನು).
8 ಉಳಿದ ಶಿಷ್ಯರು ಮೀನುಗಳಿದ್ದ ಬಲೆಯನ್ನು ಎಳೆಯುತ್ತಾ ಒಂದು ಚಿಕ್ಕ ದೋಣಿಯಲ್ಲಿ ಬಂದರು; (ಯಾಕಂದರೆ ಅವರು ದಡದಿಂದ ದೂರವಿರಲಿಲ್ಲ; ಆದರೆ ಅದು ಇನ್ನೂರು ಮೊಳ ದಷ್ಟಿತ್ತು).
9 ಅವರು ದಡಕ್ಕೆ ಬಂದ ಕೂಡಲೆ

ಕೆಂಡಗಳನ್ನೂ ಅವುಗಳ ಮೇಲೆ ಇಟ್ಟಿದ್ದ
ಮಿಾನುಗಳನ್ನೂ ರೊಟ್ಟಿಯನ್ನೂ ಕಂಡರು.
10 ಯೇಸು ಅವರಿಗೆ--ನೀವು ಈಗ ಹಿಡಿದ
ಮಿಾನುಗಳಲ್ಲಿ ಕೆಲ ವನ್ನು ತನ್ನಿರಿ ಅಂದನು.
11 ಸೀಮೋನ ಪೇತ್ರನು ಹೋಗಿ ನೂರೈವತ್ತು
ಮೂರು ದೊಡ್ಡ ಮಿಾನುಗಳಿಂದ ತುಂಬಿದ
ಬಲೆಯನ್ನು ದಡಕ್ಕೆ ಎಳೆದನು. ಅಷ್ಟು ಮಿಾನು
ಗಳಿದ್ದರೂ ಬಲೆಯು ಹರಿದಿರಲಿಲ್ಲ.
12 ಯೇಸು ಅವ ರಿಗೆ--ಬಂದು
ಊಟಮಾಡಿರಿ ಅಂದನು; ಆತನು
ಕರ್ತನೆಂದು ತಿಳಿದಿದ್ದರಿಂದ--ನೀನು ಯಾರು
ಎಂದು ಆತನನ್ನು ಕೇಳಲು ಶಿಷ್ಯರಲ್ಲಿ
ಯಾರಿಗೂ ಧೈರ್ಯ ವಿರಲಿಲ್ಲ.

13 ಆಗ ಯೇಸು ಬಂದು ರೊಟ್ಟಿಯನ್ನು
ತೆಗೆದುಕೊಂಡು ಕೊಟ್ಟನು; ಹಾಗೆಯೇ
ಮೀನನ್ನೂ ಕೊಟ್ಟನು.
14 ಯೇಸು ಸತ್ತವರೊಳಗಿಂದ ಎದ್ದ ಮೇಲೆ
ತನ್ನ ಶಿಷ್ಯರಿಗೆ ತನ್ನನ್ನು ತೋರಿಸಿಕೊಂಡದ್ದು
ಇದು ಮೂರನೆಯ ಸಾರಿ.
15 ಅವರು ಊಟಮಾಡಿದ ಮೇಲೆ ಯೇಸು
ಸೀಮೋನ ಪೇತ್ರನಿಗೆ--ಯೋನನ ಮಗನಾದ
ಸೀಮೋನನೇ, ನೀನು ಇವುಗಳಿಗಿಂತ ನನ್ನನ್ನು
ಹೆಚ್ಚಾಗಿ ಪ್ರೀತಿಸುತ್ತೀಯೋ ಎಂದು ಕೇಳಲು
ಅವನು ಆತ ನಿಗೆ--ಹೌದು, ಕರ್ತನೇ, ನಾನು
ನಿನ್ನನ್ನು ಪ್ರೀತಿಸುತ್ತೇ ನೆಂಬದನ್ನು ನೀನೇ ಬಲ್ಲೆ
ಅಂದನು. ಅದಕ್ಕೆ ಆತನು ಅವನಿಗೆ

16 ಆತನು ತಿರಿಗಿ ಎರಡನೆಯ ಸಾರಿ
ಅವನಿಗೆ--ಯೋನನ ಮಗನಾದ
ಸೀಮೋನನೇ, ನೀನು ನನ್ನನ್ನು
ಪ್ರೀತಿಸುತ್ತೀಯೋ ಎಂದು ಕೇಳಲು ಅವನು
ಆತನಿಗೆ--ಹೌದು, ಕರ್ತನೇ, ನಾನು ನಿನ್ನನ್ನು
ಪ್ರೀತಿಸುತ್ತೇನೆಂಬದನ್ನು ನೀನೇ ಬಲ್ಲೆ
ಅಂದನು. ಅದಕ್ಕೆ ಆತನು ಅವನಿಗೆ--ನನ್ನ
ಕುರಿಗಳನ್ನು ಮೇಯಿಸು ಎಂದು
17 ಆತನು ಮೂರನೆಯ ಸಾರಿ ಅವನಿಗೆ--
ಯೋನನ ಮಗನಾದ ಸೀಮೋನನೇ, ನೀನು
ನನ್ನನ್ನು ಪ್ರೀತಿಸುತ್ತೀಯೋ ಎಂದು
ಕೇಳಿದನು. ಆತನು ಮೂರನೆಯ ಸಾರಿ--
ನೀನು ನನ್ನನ್ನು ಪ್ರೀತಿಸುತ್ತೀಯೋ ಎಂದು

ತನ್ನನ್ನು ಕೇಳಿದ್ದಕ್ಕೆ ಪೇತ್ರನು ದುಃಖಪಟ್ಟು--ಕರ್ತನೇ, ನಿನಗೆ ಎಲ್ಲವುಗಳು ತಿಳಿದವೆ; ನಾನು ನಿನ
18 ನಾನು ನಿನಗೆ ನಿಜನಿಜವಾಗಿ ಹೇಳುತ್ತೇನೆ--ನೀನು ಯೌವನಸ್ಥನಾಗಿದ್ದಾಗ ನೀನೇ ನಿನ್ನ ನಡುಕಟ್ಟಿಕೊಂಡು ಇಷ್ಟಬಂದ ಕಡೆಗೆ ತಿರುಗಾ ಡುತ್ತಿದ್ದಿ; ಆದರೆ ನೀನು ಮುದುಕನಾದಾಗ ನಿನ್ನ ಕೈಗಳನ್ನು ಚಾಚುವಿ, ಆಗ ಮತ್ತೊಬ್ಬನು ನಿನ್ನ ನಡುವನ್ನು ಕಟ್ಟಿ ನಿನಗೆ ಇಷ್ಟವಿಲ್ಲದ ಕಡೆಗೆ ನಿನ್ನನ್ನು ತೆಗೆದುಕೊಂ
19 ಅವನು ಎಂಥ ಮರಣ ದಿಂದ ದೇವರನ್ನು ಮಹಿಮೆಪಡಿಸಬೇಕಾಗಿದೆ ಎಂದು ಸೂಚಿಸಿ ಆತನು ಇದನ್ನು ಹೇಳಿದನು. ಆತನು ಇದನ್ನು

ಹೇಳಿದ ಮೇಲೆ ಅವನಿಗೆ--ನನ್ನನ್ನು
ಹಿಂಬಾಲಿಸು ಅಂದನು.
20 ಊಟದಲ್ಲಿ ಆತನ ಎದೆಗೆ
ಒರಗಿಕೊಂಡು-- ಕರ್ತನೇ, ನಿನ್ನನ್ನು
ಹಿಡುಕೊಡುವವನು ಯಾರು ಎಂದು
ಕೇಳಿದಂಥ ಮತ್ತು ಯೇಸು ಪ್ರೀತಿಸಿದಂಥ
ಶಿಷ್ಯನು ಹಿಂದೆ ಬರುವದನ್ನು ಪೇತ್ರನು
ಹಿಂತಿರುಗಿ ನೋಡಿ
21 ಯೇಸುವಿಗೆ--ಕರ್ತನೇ, ಈ ಮನುಷ್ಯನ
ವಿಷಯವೇನು ಅಂದನು.
22
22 ಯೇಸು ಅವನಿಗೆ--ನಾನು ಬರುವ ತನಕ
ಅವನು ಇರಬೇಕೆಂದು ನನಗೆ ಮನಸ್ಸಿದ್ದರೆ

ಅದು ನಿನಗೇನು? ನೀನು ನನ್ನನ್ನು ಹಿಂಬಾಲಿಸು ಅಂದನು.
23 ಆಗ ಆ ಶಿಷ್ಯನು ಸಾಯುವದಿಲ್ಲವೆಂಬ ಮಾತು ಸಹೋದರರಲ್ಲಿ ಹರಡಿತು. ಆದರೂ--ಅವನು ಸಾಯುವದಿಲ್ಲವೆಂದು ಯೇಸು ಅವನಿಗೆ ಹೇಳಲಿಲ್ಲ; ಆದರೆ--ನಾನು ಬರುವ ತನಕ ಅವನು ಇರುವದು ನನಗೆ ಮನಸ್ಸಿದ್ದರೆ ಅದು ನಿನಗೇನು ಎಂತಲೇ ಹೇಳಿದನು.
24 ಇವುಗಳ ವಿಷಯವಾಗಿ ಸಾಕ್ಷಿ ಹೇಳಿ ಇವುಗಳನ್ನು ಬರೆದ ಶಿಷ್ಯನು ಇವನೇ; ಇವನ ಸಾಕ್ಷಿಯು ಸತ್ಯವೆಂದು ನಾವು ಬಲ್ಲೆವು.
25 ಇದಲ್ಲದೆ ಯೇಸು ಮಾಡಿದವುಗಳು

ಬಹಳ ಉಂಟು; ಅವುಗಳನ್ನು ಒಂದೊಂದಾಗಿ ಬರೆಯುವ ದಾದರೆ ಬರೆಯಬೇಕಾದ ಪುಸ್ತಕಗಳನ್ನು ಲೋಕವೇ ಹಿಡಿಸಲಾರದೆ ಹೋದೀತೆಂದು ನಾನು ನೆನಸುತ್ತೇನೆ. ಆಮೆನ್.

# ರೋಮಾಪುರದವರಿಗೆ

## ಅಧ್ಯಾಯ 1

1 ಪೌಲನೆಂಬ ನಾನು ಯೇಸು ಕ್ರಿಸ್ತನ
ದಾಸನೂ ಅಪೊಸ್ತಲನಾಗಿರುವದಕ್ಕೆ ಕರೆ
ಯಲ್ಪಟ್ಟು ದೇವರ ಸುವಾರ್ತೆಗೋಸ್ಕರ
ಪ್ರತ್ಯೇಕಿಸ ಲ್ಪಟ್ಟವನೂ ಆಗಿದ್ದೇನೆ.
2 (ಆ ಸುವಾರ್ತೆಯನ್ನು ಆತನು
ಮುಂಚಿತವಾಗಿ ಪರಿಶುದ್ಧ ಬರಹಗಳಲ್ಲಿ ತನ್ನ
ಪ್ರವಾದಿ ಗಳ ಮುಖಾಂತರ ವಾಗ್ದಾನ
ಮಾಡಿದ್ದನು).

3 ಅದು ಯಾವದೆಂದರೆ, ಆತನು ಶಾರೀರಕವಾಗಿ ದಾವೀದನ ಸಂತಾನದಲ್ಲಿ ಹುಟ್ಟಿದಾತನೂ ನಮ್ಮ ಕರ್ತನೂ ಆಗಿರುವ ದೇವರಕುಮಾರನಾದ ಯೇಸು ಕ್ರಿಸ್ತನ ವಿಷಯವಾ ದದ್ದೇ;
4 ಪರಿಶುದ್ಧ ಆತ್ಮಕ್ಕನು ಸಾರವಾಗಿ ಸತ್ತವರೊಳ ಗಿಂದ ಪುನರುತ್ಥಾನ ಹೊಂದುವದರ ಮೂಲಕ ಆತನು ದೇವಕುಮಾರನೆಂದು ಬಲದೊಂದಿಗೆ ಪ್ರಕಟಿಸಲ್ಪ ಟ್ಟನು;
5 ಆತನ ಹೆಸರಿಗಾಗಿ ಎಲ್ಲಾ ಜನಾಂಗಗಳವರು ನಂಬಿಕೆಗೆ ವಿಧೇಯರಾಗುವಂತೆ ಆತನಿಂದ ನಾವು ಕೃಪೆಯನ್ನೂ ಅಪೊಸ್ತಲತನವನ್ನೂ ಹೊಂದಿದ್ದೇವೆ.

6 ಅವರೊಳಗೆ ನೀವು ಸಹ ಯೇಸು
ಕ್ರಿಸ್ತನವರಾಗಿರುವ ದಕ್ಕಾಗಿ ಕರೆಯಲ್ಪಟ್ಟಿದ್ದೀರಿ.
7 ಇದಲ್ಲದೆ ದೇವರಿಗೆ ಪ್ರಿಯ ರಾಗಿದ್ದು
ಪರಿಶುದ್ಧರಾಗುವದಕ್ಕೆ ಕರೆಯಲ್ಪಟ್ಟ ರೋಮ್
ನಲ್ಲಿರುವವರೆಲ್ಲರಿಗೆ ನಮ್ಮ ತಂದೆಯಾದ
ದೇವ ರಿಂದಲೂ ಕರ್ತನಾದ ಯೇಸು
ಕ್ರಿಸ್ತನಿಂದಲೂ ನಿಮಗೆ ಕೃಪೆಯೂ
ಸಮಾಧಾನವೂ ಉಂಟಾಗಲಿ.
8 ಮೊದಲನೆಯದಾಗಿ ನಿಮ್ಮ ನಂಬಿಕೆಯು
ಲೋಕ ದಲ್ಲೆಲ್ಲಾ ಪ್ರಸಿದ್ಧವಾದದರಿಂದ
ನಿಮ್ಮೆಲ್ಲರ ವಿಷಯವಾಗಿ ಯೇಸು ಕ್ರಿಸ್ತನ
ಮುಖಾಂತರ ನಾನು ನನ್ನ ದೇವರಿಗೆ
ಸ್ತೋತ್ರಸಲ್ಲಿಸುತ್ತೇನೆ.

9 ನಾನು ಯಾವಾಗಲೂ ಪ್ರಾರ್ಥನೆಗಳಲ್ಲಿ ಎಡೆಬಿಡದೆ ನಿಮ್ಮನ್ನು ಜ್ಞಾಪಕ ಮಾಡಿ ಕೊಳ್ಳುತ್ತೇನೆ. ನಾನು ಯಾವಾತನ ಮಗನ ಸುವಾರ್ತೆ ಯಲ್ಲಿ ನನ್ನ ಆತ್ಮದೊಂದಿಗೆ ಸೇವಿಸುತ್ತೇನೋ ಆ ದೇವರೇ ಇದಕ್ಕೆ ನನ್ನ ಸಾಕ್ಷಿ.
10 ಕೊನೆಯದಾಗಿ ನಾನು ನಿಮ್ಮ ಬಳಿಗೆ ಹೇಗಾದರೂ ಬರುವದಕ್ಕೆ ದೇವರ ಚಿತ್ತದಿಂದ ನನ್ನ ಪ್ರಯಾಣವು ಸಫಲವಾಗುವಂತೆ ಬೇಡಿಕೊಳ್ಳುತ್ತೇನೆ.
11 ನೀವು ಸ್ಥಿರಗೊಳ್ಳುವಂತೆ ನನ್ನ ಮುಖಾಂತರ ನಿಮಗೆ ಯಾವದಾದರೂ ಆತ್ಮೀಕದಾನ ದೊರೆಯಲಿ ಎಂದು ನಾನು

ನಿಮ್ಮನ್ನು ನೋಡಲು ಹಂಬಲಿಸುತ್ತೇನೆ.
12 ಹೀಗೆ ಪರಸ್ಪರ ನಂಬಿಕೆಯ ಮೂಲಕ ನಾನು ನಿಮ್ಮೊಂದಿಗೆ ಆದರಿಸಲ್ಪಡುವೆನು.
13 ಇದಲ್ಲದೆ ಸಹೋದರರರೇ, ಬೇರೆ ಅನ್ಯಜನಗಳಲ್ಲಿ ಫಲವುಂಟಾದಂತೆ ನಿಮ್ಮಲ್ಲಿಯೂ ನನಗೆ ಯಾವದಾದರೂ ಫಲ ದೊರೆಯಲೆಂದು ನಿಮ್ಮ ಬಳಿಗೆ ಬರುವದಕ್ಕೆ ನಾನು ಅನೇಕಸಾರಿ ಉದ್ದೇಶಿಸಿ ದಾಗ್ಯೂ ಈ ವರೆಗೆ ಅಡ್ಡಿಯಾಯಿತೆಂದು ನೀವು ತಿಳಿದಿರಬೇಕೆಂದು ನಾನು ಆಶಿಸುತ್ತೇನೆ.
14 ನಾನು ಗ್ರೀಕರಿಗೂ ಅನ್ಯಜನರಿಗೂ ಜ್ಞಾನಿಗಳಿಗೂ ಅಜ್ಞಾನಿ ಗಳಿಗೂ ಋಣಸ್ಥನಾಗಿದ್ದೇನೆ.

15 ಹೀಗೆ ನಾನಾದರೋ ರೋಮ್‍ನಲ್ಲಿರುವ
ನಿಮಗೂ ಸುವಾರ್ತೆಯನ್ನು ಸಾರಲು
ಸಿದ್ಧನಾಗಿದ್ದೇನೆ.
16 ಕ್ರಿಸ್ತನ ಸುವಾರ್ತೆಯ ವಿಷಯದಲ್ಲಿ
ನಾನು ನಾಚಿಕೆಪಡುವದಿಲ್ಲ; ಅದು ಮೊದಲು
ಯೆಹೂದ್ಯ ರಿಗೂ ತರುವಾಯ ಗ್ರೀಕರಿಗೂ
ಅಂತೂ ನಂಬುವ ಪ್ರತಿಯೊಬ್ಬನಿಗೂ
ರಕ್ಷಣೆಗಾಗಿ ದೇವರ ಶಕ್ತಿಯಾಗಿದೆ.
17 ನೀತಿವಂತನು ನಂಬಿಕೆಯಿಂದಲೇ
ಜೀವಿಸುವನು ಎಂದು ಬರೆಯಲ್ಪಟ್ಟಂತೆ
ದೇವರ ನೀತಿಯು ಅದರಲ್ಲಿ ವಿಶ್ವಾಸದಿಂದ
ವಿಶ್ವಾಸಕ್ಕೆ ಪ್ರಕಟವಾಯಿತು.
18 ಸತ್ಯವನ್ನು ಅನೀತಿಯಲ್ಲಿ ತಡೆಹಿಡಿದ

ಮನುಷ್ಯರ ಎಲ್ಲಾ ಭಕ್ತಿಹೀನತೆಗೆ ಮತ್ತು ಅನೀತಿಗೆ ವಿರೋಧ ವಾಗಿ ದೇವರ ಕೋಪವು ಪರಲೋಕದಿಂದ ತೋರಿ ಬರುತ್ತದೆ.
19 ದೇವರ ವಿಷಯವಾಗಿ ತಿಳಿಯಬಹು ದಾದದ್ದು ಅವರಲ್ಲಿ ಪ್ರಕಟವಾಗಿದೆ; ದೇವರೇ ಅದನ್ನು ಅವರಿಗೆ ತಿಳಿಯಪಡಿಸಿದ್ದಾನೆ.
20 ಹೇಗೆಂದರೆ ಜಗದು ತ್ಪತ್ತಿಗೆ ಮೊದಲುಗೊಂಡು ಆತನ ಅದೃಶ್ಯವಾದವುಗಳು ಅಂದರೆ ಆತನ ನಿತ್ಯ ಶಕ್ತಿಯೂ ದೈವತ್ವವೂ ಸೃಷ್ಟಿಗಳನ್ನು ಗ್ರಹಿಸುವದರ ಮೂಲಕ ಸ್ಪಷ್ಟವಾಗಿ ಕಾಣಬರುತ್ತವೆ. ಆದಕಾರಣ ಅವರು ನೆವವಿಲ್ಲದವರಾಗಿದ್ದಾರೆ.

21 ಅವರು ದೇವರನ್ನು ಅರಿತಾಗ ಆತನನ್ನು
ದೇವರೆಂದು ಮಹಿಮೆಪಡಿಸಲಿಲ್ಲ,
ಕೃತಜ್ಞತೆಯುಳ್ಳವರಾಗಿಯೂ ಇರಲಿಲ್ಲ;
ಅವರು ತಮ್ಮ ಕಲ್ಪನೆಗಳಲ್ಲಿ ವಿಫಲರಾದರು
ಮತ್ತು ಮೂರ್ಖತನದ ಅವರ ಹೃದಯವು
ಕತ್ತಲಾ ಯಿತು.
22 ತಾವು ಜ್ಞಾನಿಗಳೆಂದು ಹೇಳಿಕೊಂಡು
ಹುಚ್ಚ ರಾದರು;
23 ಲಯವಿಲ್ಲದ ದೇವರ ಮಹಿಮೆಯನ್ನು
ಲಯವಾಗುವ ಮನುಷ್ಯ, ಪಕ್ಷಿ, ಪಶುಗಳ
ಮತ್ತು ಹರಿದಾಡುವವುಗಳ ಪ್ರತಿಮೆಗೆ
ಮಾರ್ಪ ಡಿಸಿದರು.
24 ಆದಕಾರಣ ತಮ್ಮ ಹೃದಯಗಳ

ದುರಾಶೆಗಳ ಮೂಲಕ ತಮ್ಮ ಸ್ವಂತ
ದೇಹಗಳನ್ನು ತಮ್ಮೊಳಗೆ ಅವ
ಮಾನಪಡಿಸಿಕೊಳ್ಳುವಂತೆ ದೇವರು ಅವರನ್ನು
ಅಶುದ್ಧ ತನಕ್ಕೆ ಒಪ್ಪಿಸಿದನು;
25 ಅವರು ದೇವರ ವಿಷಯವಾದ ಸತ್ಯವನ್ನು
ಸುಳ್ಳಿಗೆ ಬದಲಾಯಿಸಿ ಸೃಷ್ಟಿಕರ್ತನಿಗಿಂತ
ಹೆಚ್ಚಾಗಿ ಸೃಷ್ಟಿಯನ್ನೇ ಆರಾಧಿಸಿ ಸೇವಿಸಿದರು;
ಆತನು (ಸೃಷ್ಟಿಕರ್ತನು) ಎಂದೆಂದಿಗೂ ಸ್ತುತಿ
ಹೊಂದತಕ್ಕವನು. ಆಮೆನ್.
26 ಈ ಕಾರಣದಿಂದ ದೇವರು ಅವರನ್ನು
ತುಚ್ಛವಾದ ಮನೋಭಾವಗಳಿಗೆ
ಒಪ್ಪಿಸಿಬಿಟ್ಟನು. ಹೇಗೆಂದರೆ ಅವರ ಹೆಂಗಸರು
ಸಹ ಸ್ವಾಭಾವಿಕವಾದ ಭೋಗ ವನ್ನು ಸ್ವಭಾವ

ವಿರುದ್ಧವಾದ ಭೋಗಕ್ಕೆ ಮಾರ್ಪಡಿ ಸಿದರು.
27 ಅದರಂತೆ ಗಂಡಸರೂ ಸ್ವಾಭಾವಿಕ ಸ್ತ್ರೀ ಭೋಗವನ್ನು ಬಿಟ್ಟು ಒಬ್ಬರಮೇಲೊಬ್ಬರು ತಮ್ಮ ಕಾಮಾತುರದಿಂದ ತಾಪಪಡುತ್ತಾ ಗಂಡಸರ ಸಂಗಡ ಗಂಡಸರು ಅಯೋಗ್ಯವಾದದ್ದನ್ನು ಮಾಡುತ್ತಾ ತಮ್ಮ ತಪ್ಪಿಗೆ ತಕ್ಕ ಪ್ರತಿಫಲವನ್ನು ತಮ್ಮಲ್ಲಿ ಹೊಂದಿದರು.
28 ಇದಲ್ಲದೆ ಅವರು ತಮ್ಮ ತಿಳುವಳಿಕೆಯಿಂದ ದೇವರನ್ನು ಸ್ಮರಿಸುವದಕ್ಕೆ ಮನಸ್ಸಿಲ್ಲದ ಕಾರಣ ದೇವರು ಅವರನ್ನು ಮಾಡಬಾರದವುಗಳನ್ನು ಮಾಡು ವಂತೆ ಅನಿಷ್ಟಭಾವಕ್ಕೆ ಒಪ್ಪಿಸಿದನು.

29 ಹೀಗೆ ಅವರು ಸಕಲ ಅನೀತಿಯಿಂದಲೂ ಜಾರತ್ವ ದುರ್ಮಾರ್ಗತನ ದುರಾಶೆ ದುಷ್ಟತ್ವ ಇವುಗಳಿಂದಲೂ ತುಂಬಿದವರಾಗಿ ಹೊಟ್ಟೇಕಿಚ್ಚು ಕೊಲೆ ವಿವಾದ ಮೋಸ ತುಂಬಿದವರೂ ಅತಿಉಗ್ರತೆಯಿಂದ ತುಂಬಿದವರೂ ಪಿಸುಗುಟ್ಟುವ ವರೂ
30 ಚಾಡಿಹೇಳುವವರೂ ದೇವರನ್ನು ಹಗೆ ಮಾಡುವವರೂ ಧಿಕ್ಕರಿಸುವವರೂ ಅಹಂಕಾರಿಗಳೂ ಉಬ್ಬಿಕೊಳ್ಳುವವರೂ ಕೆಟ್ಟವುಗಳನ್ನು ಕಲ್ಪಿಸುವವರೂ ತಂದೆತಾಯಿಗಳಿಗೆ ಅವಿಧೇಯರೂ
31 ತಿಳುವಳಿಕೆಯಿಲ್ಲ ದವರೂ ಪ್ರಮಾಣಕ್ಕೆ ತಪ್ಪುವವರೂ ಸ್ವಾಭಾವಿಕವಾದ

ಮಮತೆಯಿಲ್ಲದವರೂ
ಸಮಾಧಾನವಾಗದವರೂ
ಕರುಣೆಯಿಲ್ಲದವರೂ ಆದರು.
32 ಇಂಥವುಗಳನ್ನು ಮಾಡುವವರು ಮರಣಕ್ಕೆ ಯೋಗ್ಯರೆಂಬ ದೇವರ ನ್ಯಾಯತೀರ್ಪನ್ನು ಅವರು ತಿಳಿದವರಾಗಿದ್ದರೂ ಅವು ಗಳನ್ನು ಮಾಡುವದಲ್ಲದೆ ಅಂಥವುಗಳನ್ನು ಮಾಡುವವ ರಲ್ಲಿ ಸಂತೋಷಪಡುತ್ತಾರೆ.

# ಅಧ್ಯಾಯ 2

1 ಆದದರಿಂದ ಓ ಮನುಷ್ಯನೇ, ತೀರ್ಪು ಮಾಡುವ ನೀನು ಯಾವನಾಗಿದ್ದರೂ ನೆವವಿಲ್ಲದವನಾಗಿದ್ದೀ; ಹೇಗೆಂದರೆ ಬೇರೊಬ್ಬನಿಗೆ ತೀರ್ಪು ಮಾಡುವ ನೀನು ಅಂಥವುಗಳನ್ನೇ ಮಾಡುವವ ನಾದ್ದರಿಂದ ನಿನ್ನಷ್ಟಕ್ಕೆ ನೀನೇ ತೀರ್ಪು ಮಾಡಿಕೊಂಡ ಹಾಗಾಯಿತು.
2 ಆದರೆ ಅಂಥವುಗಳನ್ನು ಮಾಡುವವರ ಮೇಲೆ ಸತ್ಯಕ್ಕನುಸಾರವಾಗಿ ದೇವರ ನ್ಯಾಯತೀರ್ಪು ಇದೆಯೆಂದು ನಮಗೆ ನಿಶ್ಚಯವುಂಟು.

3 ಅಂಥವು ಗಳನ್ನು ಮಾಡುವವರಿಗೆ ತೀರ್ಪು ಮಾಡುವ ಓ ಮನುಷ್ಯನೇ, ಅವುಗಳನ್ನೇ ಮಾಡುವವನಾದ ನೀನು ದೇವರ ನ್ಯಾಯತೀರ್ಪಿನಿಂದ ತಪ್ಪಿಸಿಕೊಳ್ಳುತ್ತೇನೆಂದು ಯೋಚಿಸುತ್ತೀಯೋ?
4 ಇಲ್ಲವೆ ದೇವರ ದಯೆಯು ನಿನ್ನನ್ನು ಮಾನಸಾಂತರಕ್ಕೆ ನಡಿಸುತ್ತದೆಯೆಂದು ನೀನು ತಿಳಿಯದೆ ಆತನ ಅಪಾರವಾದ ದಯೆ ಸಹನೆ ದೀರ್ಘ ಶಾಂತಿ ಇವುಗಳನ್ನು ಅಸಡ್ಡೆಮಾಡುತ್ತೀಯೋ?
5 ಹೀಗೆ ನಿನ್ನ ಕಾಠಿಣ್ಯತೆ ಮತ್ತು ಪಶ್ಚಾತ್ತಾಪವಿಲ್ಲದ ಹೃದಯದಿಂದ ಉಗ್ರತೆಯ ದಿನಕ್ಕಾಗಿಯೂ ದೇವರ ನೀತಿಯುಳ್ಳ

ನ್ಯಾಯತೀರ್ವಿಕೆಯ ಪ್ರತ್ಯಕ್ಷತೆಗಾಗಿಯೂ ದೇವರ ಕೋಪವನ್ನು ನಿನಗೋಸ್ಕರ ಕೂಡಿಸಿಟ್ಟುಕೊಳ್ಳುತ್ತಾ ಇದ್ಧೀ.
6 ದೇವರು ಪ್ರತಿಯೊಬ್ಬನಿಗೆ ಅವನವನ ಕೃತ್ಯಗಳಿ ಗನುಸಾರವಾಗಿ ಪ್ರತಿಫಲ ಕೊಡುವನು.
7 ಯಾರು ಒಳ್ಳೆಯದನ್ನು ಮಾಡುವದರಲ್ಲಿ ತಾಳ್ಮೆಯಿಂದಿದ್ದು ಮಹಿಮೆ ಮಾನ ಮತ್ತು ನಿರ್ಲಯತ್ವವನ್ನು ಹುಡುಕು ತ್ತಾರೋ ಅವರಿಗೆ ನಿತ್ಯಜೀವವನ್ನೂ
8 ಕಲಹಪ್ರಿಯ ರಾಗಿದ್ದು ಸತ್ಯಕ್ಕೆ ವಿಧೇಯರಾಗದೆ ಅನೀತಿಗೆ ವಿಧೇಯ ರಾಗಿ
9 ಕೆಟ್ಟದ್ದನ್ನು ಮಾಡುವ ಪ್ರತಿಯೊಬ್ಬನಿಗೆ

ಅಂದರೆ ಮೊದಲು ಯೆಹೂದ್ಯರಿಗೆ ಆಮೇಲೆ ಅನ್ಯರಿಗೆ ಸಹ ರೌದ್ರ, ಕೋಪ, ಸಂಕಟ ಮತ್ತು ಯಾತನೆಯನೂ
10 ಆದರೆ ಒಳ್ಳೆಯದನ್ನು ಮಾಡುವ ಪ್ರತಿ ಮನುಷ್ಯನಿಗೆ ಅಂದರೆ ಮೊದಲು ಯೆಹೂದ್ಯರಿಗೆ ಆಮೇಲೆ ಅನ್ಯರಿಗೆ ಸಹ ಮಹಿಮೆ ಮಾನ ಮತ್ತು ಸಮಾಧಾನವನ್ನೂ ಕೊಡುವನು.
11 ದೇವರಲ್ಲಿ ಪಕ್ಷಪಾತವಿಲ್ಲ.
12 ನ್ಯಾಯ ಪ್ರಮಾಣವಿಲ್ಲದೆ ಪಾಪ ಮಾಡಿದವರೆಲ್ಲರೂ ನ್ಯಾಯ ಪ್ರಮಾಣವಿಲ್ಲದೆ ನಾಶವಾಗುವರು; ನ್ಯಾಯಪ್ರಮಾಣ ವುಳ್ಳವರಾಗಿದ್ದು ಪಾಪ ಮಾಡಿದವರು

ನ್ಯಾಯಪ್ರಮಾ ಣದಿಂದಲೇ ತೀರ್ಪು ಹೊಂದುವರು.
13 (ನ್ಯಾಯ ಪ್ರಮಾಣವನ್ನು ಕೇಳುವವರು ದೇವರ ಸನ್ನಿಧಿಯಲಿ ನೀತಿವಂತರಾಗುವದಿಲ್ಲ; ನ್ಯಾಯಪ್ರಮಾಣವನ್ನು ಕೈ ಕೊಂಡು ನಡೆಯುವವರೇ ನೀತಿವಂತರೆಂದು ಎಣಿಸಲ್ಪಡುವರು.
14 ನ್ಯಾಯಪ್ರಮಾಣವಿಲ್ಲದ ಅನ್ಯಜನರು ನ್ಯಾಯಪ್ರಮಾಣದಲ್ಲಿರುವವುಗಳನ್ನು ಸ್ವಾಭಾವಿಕವಾಗಿ ಕೈಕೊಳ್ಳುವಾಗ ನ್ಯಾಯಪ್ರಮಾಣವಿಲ್ಲದ ಇವರು ತಮಗೆ ತಾವೇ ನ್ಯಾಯಪ್ರಮಾಣವಾಗಿದ್ದಾರೆ.
15 ಅವರ ಮನಸ್ಸಾಕ್ಷಿಯು ಸಹ ಸಾಕ್ಷಿಕೊಟ್ಟು

ಅವರ ಯೋಚನೆಗಳು ಒಂದಕ್ಕೊಂದು ತಪ್ಪುಹೊರಿಸುತ್ತಾ ಇಲ್ಲವೆ ಪ್ರತಿವಾದ ಮಾಡುತ್ತಾ ಇರುವದರಿಂದ ಅವರು ತಮ್ಮ ಹೃದಯ ಗಳಲ್ಲಿ ಬರೆದಿರುವ ನ್ಯಾಯಪ್ರಮಾಣದ ಕ್ರಿಯೆಗಳನ್ನು ತೋರಿಸುತ್ತಾರೆ).
16 ಮನುಷ್ಯರ ರಹಸ್ಯಗಳ ವಿಷಯ ವಾಗಿ ನನ್ನ ಸುವಾರ್ತೆಗನುಸಾರ ಯೇಸು ಕ್ರಿಸ್ತನ ಮುಖಾಂತರ ದೇವರು ನ್ಯಾಯತೀರಿಸುವ ದಿವಸದಲ್ಲಿ ಅವರು ತೀರ್ಪು ಹೊಂದುವರು.
17 ಇಗೋ, ನೀನು ಯೆಹೂದ್ಯನೆಂದು ಕರೆಯಲ್ಪ ಟ್ಟವನೂ ನ್ಯಾಯಪ್ರಮಾಣದಲ್ಲಿ ಭರವಸವಿಟ್ಟವನೂ ದೇವರಲ್ಲಿ

ಹೆಚ್ಚಳಪಡುವವನೂ ಆಗಿದ್ದು
18 ಆತನ ಚಿತ್ತವನ್ನು ತಿಳಿದವನಾಗಿ ನ್ಯಾಯಪ್ರಮಾಣದಿಂದ ಶಿಕ್ಷಿತ ನಾಗಿದ್ದು ಅತ್ಯುತ್ತಮವಾದವುಗಳನ್ನು ಮೆಚ್ಚುವವನಾಗಿದ್ದೀ;
19 ಇದಲ್ಲದೆ ನೀನೇ ಕುರುಡರ ಮಾರ್ಗದರ್ಶ ಕನೂ ಕತ್ತಲೆಯಲ್ಲಿರುವವರಿಗೆ ಬೆಳಕೂ
20 ಮೂರ್ಖರ ಉಪಾಧ್ಯಾಯನೂ ಶಿಶುಗಳ ಬೋಧಕನೂ ನ್ಯಾಯ ಪ್ರಮಾಣದಲ್ಲಿರುವ ತಿಳುವಳಿಕೆಯ ಮತ್ತು ಸತ್ಯದ ಸ್ವರೂಪವುಳ್ಳವನೂ ಆಗಿದ್ದೀ ಎಂದು ನಂಬಿಕೊಂಡಿದ್ದೀ.

21 ಆದದರಿಂದ ಬೇರೊಬ್ಬನಿಗೆ ಬೋಧಿಸುವ
ನೀನು ನಿನಗೆ ನೀನೇ
ಬೋಧಿಸಿಕೊಳ್ಳುವದಿಲ್ಲವೋ? ಕದಿಯ
ಬೇಡವೆಂದು ಬೇರೊಬ್ಬನಿಗೆ ಸಾರುವ ನೀನು
ಕದಿಯು ತ್ತೀಯೋ?
22 ವ್ಯಭಿಚಾರ ಮಾಡಬಾರದೆಂದು ಹೇಳುವ
ನೀನು ವ್ಯಭಿಚಾರ ಮಾಡುತ್ತೀಯೋ?
ವಿಗ್ರಹಗಳನ್ನು ಅಸಹ್ಯಸುವ ನೀನು
ಪವಿತ್ರಸ್ಥಳವನ್ನು ಹೊಲೆಮಾಡು ತ್ತೀಯೋ?
23 ನ್ಯಾಯಪ್ರಮಾಣದಲ್ಲಿ ಹೆಚ್ಚಳಪಡುವ
ನೀನು ನ್ಯಾಯಪ್ರಮಾಣವನ್ನು
ವಿೀರುವದರಿಂದ ದೇವ ರನ್ನು
ಅವಮಾನಪಡಿಸುತ್ತೀಯೋ?

24 ಬರೆಯಲ್ಪಟ್ಟ ಪ್ರಕಾರ--ನಿಮ್ಮ ಮೂಲಕ ದೇವರ ಹೆಸರು ಅನ್ಯ ಜನಾಂಗಗಳಲ್ಲಿ ದೂಷಿಸಲ್ಪಡುತ್ತದೆ.
25 ನೀನು ನ್ಯಾಯಪ್ರಮಾಣವನ್ನು ಕೈಕೊಂಡರೆ ಸುನ್ನತಿಯು ನಿಜವಾಗಿಯೂ ಪ್ರಯೋಜನವಾದದ್ದೇ. ಆದರೆ ನೀನು ನ್ಯಾಯಪ್ರಮಾಣವನ್ನು ವಿಾರುವದಾದರೆ ನಿನ್ನ ಸುನ್ನತಿಯು ಸುನ್ನತಿ ಅಲ್ಲ.
26 ಆದದರಿಂದ ಸುನ್ನತಿಯಿಲ್ಲದವನು ನ್ಯಾಯ ಪ್ರಮಾಣದ ನೀತಿಯನ್ನು ಕೈಕೊಂಡರೆ ಸುನ್ನತಿಯಿಲ್ಲದವನಾದ ಅವನಿಗೆ ಅದು ಸುನ್ನತಿಯೆಂದು ಎಣಿಸಲ್ಪಡುವದಿಲ್ಲವೋ?

27 ಸ್ವಾಭಾವಿಕವಾಗಿ
ಸುನ್ನತಿಯಿಲ್ಲದವನಾಗಿದ್ದು ನ್ಯಾಯಪ್ರಮಾಣ
ವನ್ನು ನೆರವೇರಿಸುವದಾದರೆ
ನ್ಯಾಯಪ್ರಮಾಣವೂ ಸುನ್ನತಿಯೂ ಇದ್ದು
ನ್ಯಾಯಪ್ರಮಾಣವನ್ನು ವಿಾರಿ ನಡೆಯುವ
ನಿನಗೆ ಅವನು ತೀರ್ಪು ಮಾಡುವ
ದಿಲ್ಲವೋ?
28 ಹೊರಗೆ ಯೆಹೂದ್ಯನಾಗಿರುವವನು
ಯೆಹೂದ್ಯನಲ್ಲ; ಹೊರಗೆ ಶರೀರದಲ್ಲಿ
ಮಾಡಿರುವ ಸುನ್ನತಿಯು ಸುನ್ನತಿಯಲ್ಲ.
29 ಆದರೆ ಒಳಗೆ ಯೆಹೂದ್ಯ ನಾಗಿರುವವನೇ
ಯೆಹೂದ್ಯನು; ಸುನ್ನತಿಯು ಹೃದಯಕ್ಕೆ
ಸಂಬಂಧಪಟ್ಟದ್ದಾಗಿ ಅಕ್ಷರೀಕವಾಗಿರದೆ

ಆತ್ಮೀಕವಾದದ್ದೇ ಆಗಿದೆ. ಹೀಗೆ ಅವನ ಹೊಗಳಿಕೆಯು ಮನುಷ್ಯರಿಂದಾ ಗಿರದೆ ದೇವರಿಂದಲೇ ಆಗಿರುವದು.

## ಅಧ್ಯಾಯ 3

1 ಹಾಗಾದರೆ ಯೆಹೂದ್ಯರಿಗಿರುವ ಪ್ರಾಧಾನ್ಯತೆ ಏನು? ಇಲ್ಲವೆ ಸುನ್ನತಿಯಿಂದ ಲಾಭವೇನು?

2 ಎಲ್ಲಾ ವಿಷಯಗಳಲ್ಲಿಯೂ ಬಹಳ ಉಂಟು; ಮುಖ್ಯವಾಗಿ ದೈವೋಕ್ತಿಗಳು ಅವರಿಗೆ ಒಪ್ಪಿಸಲ್ಪಟ್ಟವು.

3 ಕೆಲವರು ನಂಬದಿದ್ದರೆ ಏನು? ಅವರ

ಅಪನಂಬಿಕೆಯು ದೇವರ ವಿಷಯವಾದ ನಂಬಿಕೆಯನ್ನು ನಿರರ್ಥಕ ಮಾಡುವದೋ?
4 ಹಾಗೆ ಎಂದಿಗೂ ಆಗು ವದಿಲ್ಲ; ಹೌದು, ಎಲ್ಲಾ ಮನುಷ್ಯರು ಸುಳ್ಳುಗಾರ ರಾದರೂ ದೇವರು ಸತ್ಯವಂತನೇ ಸರಿ;ಯಾಕಂದರೆ--ನೀನು ನಿನ್ನ ಮಾತುಗಳಲ್ಲಿ ನೀತಿವಂತನೆಂದು ನಿರ್ಣ ಯಿಸಲ್ಪಡಬೇಕೆಂತಲೂ ನಿನಗೆ ತೀರ್ಪಾದಾಗ ನೀನು ಗೆಲ್ಲಬೇಕೆಂತಲೂ ಬರೆದದೆ.
5 ಆದರೆ ನಮ್ಮ ಅನೀತಿಯು ದೇವರ ನೀತಿಯನ್ನು ಪ್ರಸಿದ್ಧಿಪಡಿಸುವದಾದರೆ ನಾವು ಏನು ಹೇಳೋಣ? ಪ್ರತೀಕಾರ ಮಾಡುವ ದೇವರು ಅನೀತಿವಂತನೇನು? (ನಾನು

ಮನುಷ್ಯನಂತೆ ಮಾತನಾಡುತ್ತೇನೆ).
6 ಹಾಗೆ ಎಂದಿಗೂ ಹೇಳಬಾರದು; ದೇವರು ಲೋಕಕ್ಕೆ ಹೇಗೆ ನ್ಯಾಯತೀರಿಸುವನು?
7 ನನ್ನ ಸುಳ್ಳಿನ ಮೂಲಕ ದೇವರ ವಿಷಯವಾದ ಸತ್ಯವು ಆತನ ಮಹಿಮೆಯನ್ನು ಹೆಚ್ಚಿಸು ವದಾದರೆ ನಾನು ಇನ್ನು ಪಾಪಿಯೆಂದು ಯಾಕೆ ತೀರ್ಪು ಹೊಂದಬೇಕು?
8 (ದೂಷಿಸಲ್ಪಡುವ ಪ್ರಕಾರವಾಗಿ ಯೂ ನಾವು ಹೇಳುತ್ತೇವೆಂದು ಕೆಲವರು ಅನ್ನುವ ಪ್ರಕಾರವಾಗಿಯೂ)--ಒಳ್ಳೆಯದು ಬರುವ ಹಾಗೆ ನಾವು ಕೆಟ್ಟದ್ದನ್ನು ಮಾಡೋಣವೇ? ಅಂಥವರ ದಂಡ ನೆಯು ನ್ಯಾಯವಾಗಿದೆ.

9 ಹಾಗಾದರೆ ಏನು? ನಾವು ಅವರಿಗಿಂತಲೂ
ಉತ್ತಮರಾಗಿದ್ದೇವ್ರೋ? ಇಲ್ಲವೇ ಇಲ್ಲ;
ಯಾಕಂದರೆ ಯೆಹೂದ್ಯರೂ ಅನ್ಯಜನರೂ
ಎಲ್ಲರೂ ಪಾಪಕ್ಕೊಳಗಾಗಿದ್ದಾರೆಂದು
ಮೊದಲೇ ನಾವು ಸ್ಥಾಪಿಸಿ ದ್ದೇವಲ್ಲಾ.
10 ಬರೆದಿರುವ ಪ್ರಕಾರ--ನೀತಿವಂತನು ಇಲ್ಲ,
ಒಬ್ಬನಾದರೂ ಇಲ್ಲ;
11 ತಿಳುವಳಿಕೆಯುಳ್ಳವನು ಇಲ್ಲ, ದೇವರನ್ನು
ಹುಡುಕುವವನೂ ಇಲ್ಲ.
12 ಎಲ್ಲರೂ ದಾರಿತಪ್ಪಿದವರಾಗಿ ಕೆಲಸಕ್ಕೆ
ಬಾರದವರಾದರು, ಒಳ್ಳೆ ಯದನ್ನು
ಮಾಡುವವನು ಇಲ್ಲ, ಒಬ್ಬನಾದರೂ ಇಲ್ಲ.
13 ಅವರ ಗಂಟಲು ತೆರೆದಿರುವ

ಸಮಾಧಿಯಾಗಿದೆ. ಅವರು ತಮ್ಮ ನಾಲಿಗೆಗಳಿಂದ ವಂಚಿಸುತ್ತಾರೆ; ಅವರ ತುಟಿಗಳ ಕೆಳಗೆ ಹಾವಿನ ವಿಷವಿದೆ.
14 ಅವರ ಬಾಯಿ ಶಾಪದಿಂದಲೂ ವಿಷದಿಂದಲೂ ತುಂಬಿ ಅದೆ.
15 ಅವರ ಕಾಲುಗಳು ರಕ್ತವನ್ನು ಸುರಿಸಲು ಆತುರ ಪಡುತ್ತವೆ.
16 ಅವರ ದಾರಿಗಳಲ್ಲಿ ನಾಶ ಸಂಕಟಗಳು ಉಂಟಾಗುತ್ತವೆ.
17 ಅವರು ಸಮಾಧಾನದ ಮಾರ್ಗ ವನ್ನೇ ಅರಿತವರಲ್ಲ;
18 ಅವರ ಕಣ್ಣೆದುರಿಗೆ ದೇವರ ಭಯವೇ ಇಲ್ಲ ಎಂಬವುಗಳೇ.

19 ಪ್ರತಿಯೊಂದು ಬಾಯಿ ಮುಚ್ಚಿ ಹೋಗುವಂತೆಯೂ ಲೋಕವೆಲ್ಲಾ ದೇವರ ಮುಂದೆ ದೋಷಿಯಾಗಿರುವಂತೆಯೂ ನ್ಯಾಯ ಪ್ರಮಾಣವು ಹೇಳುವವುಗಳನ್ನು ನ್ಯಾಯಪ್ರಮಾಣಕ್ಕೆ ಒಳಗಾದವರಿಗೆ ಹೇಳುತ್ತದೆಯೆಂದು ನಾವು ಬಲ್ಲೆವು.
20 ಆದದರಿಂದ ನ್ಯಾಯಪ್ರಮಾಣದ ಕ್ರಿಯೆಗಳಿಂದ ಯಾವನೂ ಆತನ ದೃಷ್ಟಿಯಲ್ಲಿ ನೀತಿವಂತನೆಂದು ನಿರ್ಣ ಯಿಸಲ್ಪಡುವದಿಲ್ಲ. ಯಾಕಂದರೆ ನ್ಯಾಯಪ್ರಮಾಣ ದಿಂದಲೇ ಪಾಪದ ಅರುಹು ಉಂಟಾಗುತ್ತದೆ.
21 ಈಗಲಾದರೋ ದೇವರ ನೀತಿಯು ನ್ಯಾಯ ಪ್ರಮಾಣವಿಲ್ಲದೆ ಪ್ರಕಟವಾಗಿದೆ.

ಅದು ನ್ಯಾಯ ಪ್ರಮಾಣದಿಂದಲೂ
ಪ್ರವಾದಿಗಳಿಂದಲೂ ಸಾಕ್ಷಿಗೊಂ ಡಿದೆ.
22 ದೇವರಿಂದಾಗುವ ಆ ನೀತಿಯು ಯಾವ
ದೆಂದರೆ ಯೇಸು ಕ್ರಿಸ್ತನನ್ನು
ನಂಬುವದರಿಂದಲೇ. ನಂಬುವವರೆಲ್ಲರಿಗೆ
ಮತ್ತು ಎಲ್ಲರ ಮೇಲೆಯೂ ದೊರ
ಕುವಂಥದು. ಹೆಚ್ಚು ಕಡಿಮೆ ಏನೂ ಇಲ್ಲ;
23 ಎಲ್ಲರೂ ಪಾಪಮಾಡಿ ದೇವರ
ಮಹಿಮೆಯನ್ನು ಕಳೆದುಕೊಂಡಿ ದ್ದಾರೆ.
24 ಅವರು ನೀತಿವಂತರೆಂದು ನಿರ್ಣಯ
ಹೊಂದುವದು ಆತನ ಉಚಿತಾರ್ಥವಾದ ಕೃಪೆ
ಯಿಂದಲೇ. ಇದು ಕ್ರಿಸ್ತ ಯೇಸುವಿನಿಂದಾದ
ವಿಮೋ ಚನೆಯ ಮೂಲಕವಾಗಿ ಆಗುವದು.

25 ಈತನು ತನ್ನ ರಕ್ತದ ಮೂಲಕ
ನಂಬಿಕೆಯಿದ್ದವರಿಗಾಗಿ ಪಾಪದ
ಪ್ರಾಯಶ್ಚಿತ್ತವಾಗಿರಬೇಕೆಂದು ದೇವರು
ಈತನನ್ನು ಮುಂದಿಟ್ಟನು. ದೇವರು
ಹಿಂದಿನಕಾಲದ ಪಾಪಗಳನ್ನು
ಸಹಿಸಿಕೊಂಡಿರಲಾಗಿ
26 ತನ್ನ ನೀತಿಯನ್ನು ಈಗಿನ ಕಾಲದಲ್ಲಿ ಹೀಗೆ
ತೋರಿಸಿ ತಾನು ನೀತಿವಂತನಾಗಿಯೂ
ಯೇಸುವಿನಲ್ಲಿ ನಂಬಿಕೆಯಿಡುವವರನ್ನು
ನೀತಿವಂತ ರೆಂದು
ನಿರ್ಣಯಿಸುವವನಾಗಿಯೂ ಪ್ರಸಿದ್ಧಿಪಡಿಸಿ
ಕೊಂಡನು.
27 ಹಾಗಾದರೆ ಹೊಗಳಿಕೊಳ್ಳುವದು ಹೇಗೆ?

ಅದು ಇಲ್ಲದೆ ಹೋಯಿತು. ಯಾವ ನಿಯಮದಿಂದ? ಕ್ರಿಯೆಗಳಿಂದಲೋ? ಅಲ್ಲ; ವಿಶ್ವಾಸ ನಿಯಮವನ್ನು ಅನುಸರಿಸುವದರಿಂದಲೇ.
28 ಆದದರಿಂದ ನ್ಯಾಯ ಪ್ರಮಾಣದ ಕ್ರಿಯೆಗಳಿಲ್ಲದೆ ನಂಬಿಕೆಯಿಂದಲೇ ಮನುಷ್ಯನು ನೀತಿವಂತನೆಂದು ನಿರ್ಣಯಿಸಲ್ಪಡುವನೆಂಬ ದಾಗಿ ನಾವು ತೀರ್ಮಾನಿಸಿಕೊಂಡಿದ್ದೇವಲ್ಲಾ.
29 ದೇವರು ಯೆಹೂದ್ಯರಿಗೆ ಮಾತ್ರ ದೇವರಾಗಿ ದ್ದಾನೋ? ಅನ್ಯಜನಗಳಿಗೆ ಸಹ ದೇವರಲ್ಲವೇ? ಹೌದು, ಆತನು ಅನ್ಯಜನರಿಗೆ ಸಹ ದೇವರಾಗಿದ್ದಾನೆ;

30 ದೇವರು ಒಬ್ಬನೇ ಆಗಿರಲಾಗಿ ಆತನು ಸುನ್ನತಿಯವರನ್ನು ನೀತಿವಂತರೆಂದು ನಿರ್ಣಯಿಸು ವದಕ್ಕೆ ಅವರ ನಂಬಿಕೆಯಿಂದಲೇ. ಸುನ್ನತಿಯಿಲ್ಲ ದವರನ್ನು ಹಾಗೆಯೇ ನಿರ್ಣಯಿಸುವದು ನಂಬಿಕೆಯ ಮೂಲಕವೇ.
31 ಹಾಗಾದರೆ ನಂಬಿಕೆಯಿಂದ ನ್ಯಾಯಪ್ರಮಾಣವನ್ನು ನಿರರ್ಥಕ ಮಾಡುತ್ತೇವೋ? ಹಾಗೆ ಎಂದಿಗೂ ಅಲ್ಲ; ಹೌದು, ನಾವು ನ್ಯಾಯಪ್ರಮಾಣವನ್ನು ಸ್ಥಿರಪಡಿಸುತ್ತೇವೆ.

# ಅಧ್ಯಾಯ 4

1 ಹಾಗಾದರೆ ನಮ್ಮ ಮೂಲಪಿತೃವಾಗಿರುವ
ಅಬ್ರಹಾಮನು ಶರೀರಸಂಬಂಧವಾಗಿ ಏನು
ಪಡೆದುಕೊಂಡನೆಂದು ಹೇಳಬೇಕು?
2 ಅಬ್ರಹಾ ಮನು ಕ್ರಿಯೆಗಳಿಂದಲೇ
ನೀತಿವಂತನಾದ ಪಕ್ಷದಲ್ಲಿ
ಹೊಗಳಿಕೊಳ್ಳುವದಕ್ಕೆ ಅವನಿಗೆ
ಆಸ್ಪದವಿರುವದು; ಆದರೆ ದೇವರ ಮುಂದೆ
ಹೊಗಳಿಕೊಳ್ಳುವದಕ್ಕೆ ಆಸ್ಪದವಿರುವದಿಲ್ಲ.
3 ಹಾಗಾದರೆ ಬರಹವು ಹೇಳುವ ದೇನು?
ಅಬ್ರಹಾಮನು ದೇವರನ್ನು ನಂಬಿದನು; ಆ
ನಂಬಿಕೆಯು ಅವನ ಲೆಕ್ಕಕ್ಕೆ ನೀತಿ ಎಂದು

ಎಣಿಸಲ್ಪಟ್ಟಿತು.
4 ಕೆಲಸ ಮಾಡಿದವನಿಗೆ ಬರುವ ಸಂಬಳವು ಕೃಪೆಯಿಂದ ದೊರಕುವಂಥದ್ದೆಂದು ಎಣಿಕೆ ಯಾಗುವದಿಲ್ಲ; ಅದು ಸಲ್ಲತಕ್ಕದ್ದೇ.
5 ಆದರೆ ಯಾವನು ಪುಣ್ಯಕ್ರಿಯೆಗಳನ್ನು ಮಾಡಿದವನಾಗಿರದೆ ಭಕ್ತಿಹೀನರನ್ನು ನೀತಿವಂತರೆಂದು ನಿರ್ಣಯಿಸುವಾತನಲ್ಲಿ ನಂಬಿಕೆ ಯಿಡುತ್ತಾನೋ ಅವನ ನಂಬಿಕೆಯೇ ನೀತಿ ಎಂದು ಎಣಿಸಲ್ಪಡುವದು.
6 ದೇವರು ಯಾವನನ್ನು ಕ್ರಿಯೆ ಗಳಿಲ್ಲದೆ ನೀತಿವಂತನೆಂದು ಎಣಿಸುತ್ತಾನೋ ಅವನು ಧನ್ಯನೆಂದು ದಾವೀದನು ಸಹ ಹೇಳುತ್ತಾನೆ.
7 ಹೇಗಂ ದರೆ--ಯಾರ ಅಪರಾಧಗಳು

ಕ್ಷಮಿಸಲ್ಪಟ್ಟಿವೆಯೋ ಯಾರ ಪಾಪಗಳು ಮುಚ್ಚಿವೆಯೋ ಅವರೇ ಧನ್ಯರು;
8 ಕರ್ತನು ಯಾವನ ಪಾಪವನ್ನು ಲೆಕ್ಕಕ್ಕೆ ತರುವ ದಿಲ್ಲವೋ ಆ ಮನುಷ್ಯನೇ ಧನ್ಯನು ಎಂಬದು.
9 ಈ ಧನ್ಯತೆಯು ಸುನ್ನತಿಯಿದ್ದವರಿಗೆ ಮಾತ್ರವೋ? ಇಲ್ಲವೆ ಸುನ್ನತಿಯಿಲ್ಲದವರಿಗೂ ಆಗುತ್ತದೋ? ಯಾಕಂದರೆ ಅಬ್ರಹಾಮನ ಲೆಕ್ಕಕ್ಕೆ ಅವನ ನಂಬಿಕೆಯೇ ನೀತಿಯೆಂದು ಎಣಿಸಲ್ಪಟ್ಟಿತೆಂಬದಾಗಿ ನಾವು ಹೇಳುತ್ತೇವಲ್ಲಾ.
10 ಹಾಗಾದರೆ ಅದು ಯಾವಾಗ ಎಣಿಸಲ್ಪಟ್ಟಿತು? ಅವನಿಗೆ ಸುನ್ನತಿಯಾದ ಮೇಲೆಯೋ? ಸುನ್ನತಿಯಾಗು ವದಕ್ಕೆ

ಮೊದಲೋ? ಸುನ್ನತಿಯಾದ ಮೇಲೆ ಅಲ್ಲ, ಸುನ್ನತಿಯಾಗುವದಕ್ಕೆ ಮೊದಲೇ ಎಣಿಸಲ್ಪಟ್ಟಿತ್ತು.
11 ಆಮೇಲೆ ನೀತಿಗೆ ಮುದ್ರೆಯಾಗಿ ಸುನ್ನತಿಯನ್ನು ಗುರುತಾಗಿ ಹೊಂದಿದನು. ಇದು ಸುನ್ನತಿಯಾಗುವದಕ್ಕೆ ಮೊದಲೇ ಅವನಿಗಿದ್ದ ನಂಬಿಕೆಯಿಂದಾಯಿತು. ಹೀಗೆ ಅವನು ನಂಬುವವರೆಲ್ಲರಿಗೆ ಅಂದರೆ ಅವರು ಸುನ್ನತಿ ಯಿಲ್ಲದವರಾದಾಗ್ಯೂ ಅವರಿಗೆ ತಂದೆಯಾದನು; ಹೀಗೆ ಅವರೂ ನೀತಿವಂತರೆಂದು ಎಣಿಸಲ್ಪಡುವರು.
12 ಇದಲ್ಲದೆ ಸುನ್ನತಿಯಿದ್ದವರಿಗೆ ತಂದೆಯಾದವನು ಸುನ್ನತಿಯವರಿಗೆ

ಮಾತ್ರವಲ್ಲ, ಆದರೆ ಅಬ್ರಹಾಮನು ಸುನ್ನತಿ ಮಾಡಿಸಿಕೊಳ್ಳುವದಕ್ಕೆ ಮುಂಚೆ ನಡೆದ ನಂಬಿಕೆಯ ಹೆಜ್ಜೆಜಾಡಿನಲ್ಲಿ ನಡೆಯುತ್ತಿರುವ ಸುನ್ನತಿ ಯಿಲ್ಲದವರಿಗೂ ತಂದೆಯಾಗಿದ್ದಾನೆ.
13 ಅವನು ಲೋಕಕ್ಕೆ ಬಾಧ್ಯನಾಗುವನೆಂಬ ವಾಗ್ದಾ ನವು ಅಬ್ರಹಾಮನಿಗಾಗಲಿ ಅವನ ಸಂತತಿಯವರಿ ಗಾಗಲಿ ನ್ಯಾಯಪ್ರಮಾಣದಿಂದ ಆದದ್ದಲ್ಲ, ನಂಬಿಕೆ ಯಿಂದಾದ ನೀತಿಯಿಂದಲೇ ಆದದ್ದು.
14 ನ್ಯಾಯ ಪ್ರಮಾಣವನ್ನನುಸರಿಸುವವರು ಬಾಧ್ಯರಾಗಿದ್ದರೆ ನಂಬಿ ಕೆಯು ವ್ಯರ್ಥವಾಯಿತು, ವಾಗ್ದಾನವೂ ನಿರರ್ಥಕ ವಾಯಿತು.

15 ನ್ಯಾಯಪ್ರಮಾಣವು ದೇವರ ಕೋಪಕ್ಕೆ ಗುರಿಮಾಡುವಂಥದ್ದು.
ನ್ಯಾಯಪ್ರಮಾಣವಿಲ್ಲದ ಪಕ್ಷ ದಲ್ಲಿ ಆಜ್ಞಾತಿಕ್ರಮಣವೂ ಇಲ್ಲ;
16 ಆದಕಾರಣ ಕೃಪೆ ಯಿಂದಲೇ ದೊರೆಯುವ ಆ ಬಾಧ್ಯತೆಯು ನಂಬಿಕೆಯ ಮುಖಾಂತರ ಸಿಕ್ಕುತ್ತದೆ. ಹೀಗೆ ಆ ವಾಗ್ದಾನವು ಅಬ್ರಹಾ ಮನ ಸಂತತಿಯವರೆಲ್ಲರಿಗೂ ಅಂದರೆ ನ್ಯಾಯ ಪ್ರಮಾಣವನ್ನು ಆಧಾರ ಮಾಡಿಕೊಂಡವರಿಗೆ ಮಾತ್ರ ವಲ್ಲದೆ ನಮ್ಮೆಲ್ಲರಿಗೆ ತಂದೆಯಾಗಿರುವ ಅಬ್ರಹಾಮ ನಲ್ಲಿದ್ದಂಥ ನಂಬಿಕೆ
17 (ನಾನು ನಿನ್ನನ್ನು ಅನೇಕ ಜನಾಂಗಗಳಿಗೆ

ತಂದೆ ಯಾಗಿ ನೇಮಿಸಿದ್ದೇನೆ ಎಂದು ಬರೆದಿರುವ ಪ್ರಕಾರ) ದೇವರು ಸತ್ತವರನ್ನು ಬದುಕಿಸುವವನಾಗಿಯೂ ಇಲ್ಲ ದ್ದನ್ನು ಇರುವದಾಗಿ ಕರೆಯುವವನಾಗಿಯೂ ಆಗಿದ್ದಾ ನೆಂದು ದೇವರ ಮುಂದೆ ಅಬ್ರಹಾಮನು ನಂಬಿದನು.
18 ಅವನು ತಾನು ಅನೇಕ ಜನಾಂಗಗಳಿಗೆ ತಂದೆಯಾಗಿ ರುವನೆಂಬ ನಿರೀಕ್ಷೆಗೆ ಆಸ್ಪದವಿಲ್ಲದಿರುವಾಗಲೂ--ನಿನ್ನ ಸಂತಾನವು ಹೀಗಾಗುವದು ಎಂದು ಹೇಳಲ್ಪಟ್ಟಂತೆ ನಿರೀಕ್ಷಿಸಿ ನಂಬಿದನು.
19 ಅವನು ಹೆಚ್ಚು ಕಡಿಮೆ ನೂರುವರುಷದವನಾಗಿದ್ದು ತನ್ನ ದೇಹವು

ಆಗಲೇ ಮೃತಪ್ರಾಯವಾಯಿತೆಂದೂ ಸಾರಳಿಗೆ ಗರ್ಭಕಾಲ ಕಳೆದುಹೋಯಿತೆಂದೂ ಯೋಚಿಸಿದನು; ಆದಾಗ್ಯೂ ಅವನು ಅಪನಂಬಿಕೆಯಿಂದ ಚಂಚಲನಾಗಲಿಲ್ಲ.
20 ದೇವರು ಮಾಡಿದ ವಾಗ್ದಾನದ ವಿಷಯದಲ್ಲಿ ಅವನು ಅಪನಂಬಿಕೆಯಿಂದ ಚಂಚಲಚಿತ್ತನಾಗಲಿಲ್ಲ; ಆದರೆ ದೇವರನ್ನು ಘನಪಡಿಸುವವನಾಗಿ ದೃಢನಂಬಿಕೆಯುಳ್ಳ ವನಾದನು.
21 ಆತನು ತನ್ನ ವಾಗ್ದಾನವನ್ನು ನೆರವೇರಿ ಸುವದಕ್ಕೆ ಸಮರ್ಥನೆಂದು ಪೂರಾ ಭರವಸವಿಟ್ಟನು.

22 ಆದದರಿಂದ ಆ ನಂಬಿಕೆಯು ಅವನ
ಲೆಕ್ಕಕ್ಕೆ ನೀತಿ ಯೆಂದು ಎಣಿಸಲ್ಪಟ್ಟಿತ್ತು.
23 ಆದರೆ ಅದು ಅವನ ಲೆಕ್ಕಕ್ಕೆ ನೀತಿಯೆಂದು
ಎಣಿಸಲ್ಪಟ್ಟದ್ದು ಅವನಿಗೋಸ್ಕರ ಮಾತ್ರವಲ್ಲದೆ
24 ನಮ್ಮ ಕರ್ತನಾದ ಯೇಸುವನ್ನು
ಸತ್ತವರೊಳಗಿಂದ ಎಬ್ಬಿಸಿದಾತನನ್ನು ನಂಬುವ
ನಾವು ನಂಬಿಕೆಯಿಂದ ನೀತಿವಂತರೆಂದು
ಎಣಿಸಲ್ಪಡುವಂತೆ ನಮಗೋಸ್ಕರವೂ
ಬರೆಯಲ್ಪಟ್ಟಿದೆ.
25 ನಮ್ಮ ಅಪ ರಾಧಗಳ ನಿಮಿತ್ತ ದೇವರು
ಆತನನ್ನು ಮರಣಕ್ಕೆ ಒಪ್ಪಿಸಿಕೊಟ್ಟು ನಮಗೆ
ನೀತಿವಂತರೆಂಬ ನಿರ್ಣಯವು ಉಂಟಾಗುವ
ಹಾಗೆ ಆತನನ್ನು ಜೀವದಿಂದ ಎಬ್ಬಿಸಿದನು.

## ಅಧ್ಯಾಯ 5

1 ಹೀಗಿರಲಾಗಿ ನಾವು ನಂಬಿಕೆಯಿಂದ ನೀತಿವಂತರಾದ ಕಾರಣ ನಮ್ಮ ಕರ್ತನಾದ ಯೇಸು ಕ್ರಿಸ್ತನ ಮೂಲಕ ನಮಗೆ ದೇವರೊಂದಿಗೆ ಸಮಾಧಾನ ಉಂಟಾಗಿದೆ.
2 ಈಗ ನಾವು ನೆಲೆ ಗೊಂಡಿರುವ ಈ ಕೃಪೆಯಲ್ಲಿ ಆತನ ಮುಖಾಂತರವೇ ನಂಬಿಕೆಯಿಂದ ಪ್ರವೇಶವಾದದರಿಂದ ದೇವರ ಮಹಿ ಮೆಯ ನಿರೀಕ್ಷೆಯಲ್ಲಿ ಉಲ್ಲಾಸಿಸುತ್ತೇವೆ.

3 ಇದು ಮಾತ್ರವಲ್ಲದೆ ನಮಗೆ ಉಂಟಾಗುವ
ಉಪದ್ರವ ಗಳಲ್ಲಿಯೂ ಹೆಚ್ಚಳ ಪಡುತ್ತೇವೆ;
ಉಪದ್ರವದಿಂದ ತಾಳ್ಮೆಯೂ
4 ತಾಳ್ಮೆಯಿಂದ ಅನುಭವವೂ ಅನುಭವ
ದಿಂದ ನಿರೀಕ್ಷೆಯೂ ಉಂಟಾಗುತ್ತವೆಂದು
ಬಲ್ಲೆವು.
5 ಈ ನಿರೀಕ್ಷೆಯು ನಾಚಿಕೆಪಡಿಸುವದಿಲ್ಲ;
ನಮಗೆ ಕೊಡಲ್ಪಟ್ಟಿರುವ ಪವಿತ್ರಾತ್ಮನ
ಮೂಲಕವಾಗಿ ದೇವರ ಪ್ರೀತಿಯು ನಮ್ಮ
ಹೃದಯಗಳಲ್ಲಿ ಧಾರಾಳವಾಗಿ ಸುರಿದದೆ.
6 ನಾವು ಅಶಕ್ತರಾಗಿದ್ದಾಗಲೇ ಕ್ರಿಸ್ತನು
ನೇಮಿತ ಕಾಲ ದಲ್ಲಿ ಭಕ್ತಿಹೀನರಿಗೋಸ್ಕರ
ಪ್ರಾಣಕೊಟ್ಟನು.

7 ನೀತಿ ವಂತನಿಗೋಸ್ಕರ ಯಾರಾದರೂ
ಪ್ರಾಣ ಕೊಡುವದು ಅಪರೂಪ,
ಒಳ್ಳೆಯುವರಿಗೋಸ್ಕರ ಪ್ರಾಣಕೊಡು ವದಕ್ಕೆ
ಯಾವನಾದರೂ ಧೈರ್ಯಮಾಡಿದರೂ
ಮಾಡಾನು.
8 ಆದರೆ ನಾವು ಪಾಪಿಗಳಾಗಿದ್ದಾಗಲೂ
ಕ್ರಿಸ್ತನು ನಮಗೋಸ್ಕರ ಪ್ರಾಣಕೊಟ್ಟದ್ದರಲ್ಲಿ
ದೇವರು ನಮ್ಮ ಮೇಲೆ ತನಗಿರುವ
ಪ್ರೀತಿಯನ್ನು ತೋರ್ಪಡಿಸಿದ್ದಾನೆ.
9 ಈಗ ನಾವು ಆತನ ರಕ್ತದಿಂದ ನೀತಿವಂತ
ರಾಗಿರಲಾಗಿ ಬರುವ ಕೋಪದಿಂದ ಆತನ
ಮೂಲಕ ರಕ್ಷಿಸಲ್ಪಡುವದು ಮತ್ತೂ
ನಿಶ್ಚಯವಲ್ಲವೇ.

10 ವೈರಿ ಗಳಾಗಿದ್ದ ನಾವು ದೇವರ ಮಗನ
ಮರಣದ ಮೂಲಕ ಆತನೊಂದಿಗೆ
ಸಮಾಧಾನವಾಗಿದ್ದರೆ ಸಮಾಧಾನವಾದ
ನಮಗೆ ಆತನ ಜೀವದಿಂದ
ರಕ್ಷಣೆಯಾಗುವದು ಮತ್ತೂ ನಿಶ್ಚಯವಲ್ಲವೇ.
11 ಇಷ್ಟು ಮಾತ್ರವಲ್ಲದೆ ನಮ್ಮ ಕರ್ತನಾದ
ಯೇಸು ಕ್ರಿಸ್ತನ ಮೂಲಕ ಈಗ ಸಮಾಧಾನ
ಹೊಂದಿದವರಾಗಿ ಆತನ ಮುಖಾಂತರ ನಾವು
ಸಹ ದೇವರಲ್ಲಿ ಹರ್ಷಗೊಳ್ಳುತ್ತೇವೆ.
12 ಈ ವಿಷಯ ಹೇಗಂದರೆ, ಒಬ್ಬ ಮನುಷ್ಯ
ನಿಂದಲೇ ಪಾಪವೂ ಪಾಪದಿಂದ ಮರಣವೂ
ಲೋಕ ದೊಳಗೆ ಸೇರಿದವು; ಎಲ್ಲರೂ
ಪಾಪಮಾಡಿದ್ದರಿಂದ ಮರಣವು ಹೀಗೆ

ಎಲ್ಲರಲ್ಲಿಯೂ ವ್ಯಾಪಿಸಿತು.
13 (ನ್ಯಾಯಪ್ರಮಾಣವು ಕೊಡಲ್ಪಡುವ ತನಕ ಪಾಪವು ಲೋಕದಲ್ಲಿತ್ತು; ಆದರೆ ನ್ಯಾಯಪ್ರಮಾಣ ವಿಲ್ಲದಿರುವಾಗ ಪಾಪವು ಲೆಕ್ಕಕ್ಕೆ ಬರುವದಿಲ್ಲ.
14 ಆದರೂ ಆದಾಮನಿಂದ ಮೋಶೆಯವರೆಗೂ ಮರಣದ ಆಳಿಕೆಯು ನಡೆಯುತ್ತಿತ್ತು. ಆದಾಮನ ಆ ಅತಿಕ್ರಮಣಕ್ಕೆ ಸಮಾನವಾದ ಪಾಪವನ್ನು ಮಾಡದೆ ಇದ್ದವರ ಮೇಲೆಯೂ ಅದು ನಡೆಯುತ್ತಿತ್ತು. ಆ ಆದಾಮನು ಬರಬೇಕಾದ ಒಬ್ಬಾತನಿಗೆ ಸೂಚನೆ ಯಾಗಿದ್ದಾನೆ.
15 ಆದರೆ ಆ ಅಪರಾಧವು ಇದ್ದಂತೆ

ಉಚಿತವಾದ ದಾನವು ಇರುವದಿಲ್ಲ; ಹೇಗಂದರೆ ಆ ಒಬ್ಬನ ಅಪ ರಾಧದಿಂದ ಎಲ್ಲಾ ಮನುಷ್ಯರು ಸತ್ತವರಾಗಿದ್ದರೆ ದೇವರ ಕೃಪೆಯೂ ಯೇಸು ಕ್ರಿಸ್ತನೆಂಬ ಈ ಒಬ್ಬ ಮನುಷ್ಯನ ಕೃಪೆಯಿಂದಾದ ದಾನವೂ ಅನೇಕರಿಗೆ ಹೇರಳವಾಗಿ ದೊರೆಯುವದು ಮತ್ತೂ ನಿಶ್ಚಯವಲ್ಲವೇ.

16 ಇದಲ್ಲದೆ ಪಾಪಮಾಡಿದ ಆ ಒಬ್ಬನಿಂದಲೇ ಬಂದಂತೆ ಈ ದಾನವು ಬರಲಿಲ್ಲ; ಯಾಕಂದರೆ ಒಬ್ಬ ಮನುಷ್ಯನ ಅಪರಾಧದ ದೆಸೆಯಿಂದಲೇ ತೀರ್ಪು ಉಂಟಾಯಿತು. ಆದರೆ ಉಚಿತವಾದ ದಾನವು ಅನೇಕರ ಅಪರಾಧಗಳ ಕಾರಣದಿಂದ ಉಂಟಾಗಿ

ನಿರ್ಣಯಿಸುವಂಥದ್ದಾಗಿದೆ.
17 ಒಬ್ಬನ ಅಪರಾಧದಿಂದ ಮರಣವು ಉಂಟಾಗಿ ಆ ಒಬ್ಬನ ದೆಸೆಯಿಂದಲೇ ಆಳಿದ್ದರೆ ಕೃಪೆಯನ್ನೂ ನೀತಿಯ ದಾನವನ್ನೂ ಹೇರಳವಾಗಿ ಹೊಂದಿದವರು ಯೇಸು ಕ್ರಿಸ್ತನೆಂಬ ಈ ಒಬ್ಬನ ಮೂಲಕ ಜೀವದಲ್ಲಿ ಆಳುವದು ಮತ್ತೂ ನಿಶ್ಚಯವಲ್ಲವೇ).
18 ಹೀಗಿರಲಾಗಿ ಒಬ್ಬನ ಅಪರಾಧದಿಂದಲೇ ಎಲ್ಲಾ ಮನುಷ್ಯರಿಗೆ ಅಪರಾಧ ನಿರ್ಣಯವು ಹೇಗೆ ಬಂತೋ ಹಾಗೆಯೇ ಒಬ್ಬನ ನೀತಿಯಿಂದಲೇ ಉಚಿತಾರ್ಥವಾದ ದಾನವು ಎಲ್ಲಾ ಮನುಷ್ಯರಿಗೆ ಜೀವದ ನೀತಿ ನಿರ್ಣಯಕ್ಕಾಗಿ ಬಂದಿತು.

19 ಒಬ್ಬ ಮನುಷ್ಯನ ಅವಿಧೇಯತ್ವದಿಂದ
ಅನೇಕರು ಹೇಗೆ ಪಾಪಿಗಳಾ ದರೋ
ಹಾಗೆಯೇ ಒಬ್ಬನ ವಿಧೇಯತ್ವದಿಂದ
ಅನೇಕರು ನೀತಿವಂತರಾಗುವರು.
20 ಹೇಗಾದರೂ ಅಪರಾಧವು ಹೆಚ್ಚಾಗಿ
ಕಂಡುಬರುವ ಹಾಗೆ ನ್ಯಾಯಪ್ರಮಾಣವು
ಪ್ರವೇಶಿಸಿತು; ಆದರೆ ಪಾಪವು ಹೆಚ್ಚಿದಲ್ಲೇ
ಕೃಪೆಯು ಎಷ್ಟೋ ಹೆಚ್ಚಾಗಿ
ಪ್ರಬಲವಾಯಿತು.
21 ಹೀಗೆ ಪಾಪವು ಮರಣವನ್ನುಂಟು
ಮಾಡುವದಕ್ಕಾಗಿ ಪ್ರಭುತ್ವವನ್ನು ನಡಿಸಿದ
ಹಾಗೆಯೇ ಕೃಪೆಯು ನೀತಿಯ ಮೂಲಕ
ನಮ್ಮ ಕರ್ತನಾದ ಯೇಸು ಕ್ರಿಸ್ತನಿಂದಾದ

ನಿತ್ಯಜೀವ ವನ್ನುಂಟು ಮಾಡುವದಕ್ಕೆ ಪ್ರಭುತ್ವ ನಡಿಸುವದು.

## ಅಧ್ಯಾಯ 6

1 ಹಾಗಾದರೆ ಏನು ಹೇಳೋಣ? ಕೃಪೆಯು ಹೆಚ್ಚಲಿ ಎಂದು ನಾವು ಪಾಪದಲ್ಲಿ ಇನ್ನೂ ಇರಬೇಕೋ?
2 ಹಾಗೆ ಎಂದಿಗೂ ಅಲ್ಲ; ಪಾಪದ ಪಾಲಿಗೆ ಸತ್ತವರಾದ ನಾವು ಇನ್ನೂ ಅದರಲ್ಲಿ ಬದುಕುವದು ಹೇಗೆ?
3 ಯೇಸು ಕ್ರಿಸ್ತನಲ್ಲಿ ಸೇರುವದಕ್ಕೆ ಬಾಪ್ತಿಸ್ಮ ಮಾಡಿಸಿಕೊಂಡವರಾದ ನಾವೆಲ್ಲರು ಆತನ

ಮರಣದಲ್ಲಿ ಸೇರುವದಕ್ಕೆ ಬಾಪ್ತಿಸ್ಮ ಮಾಡಿಸಿಕೊಂಡೆವೆಂದು ನಿಮಗೆ ತಿಳಿಯದೋ?
4 ಹೀಗಿರಲಾಗಿ ನಾವು ಬಾಪ್ತಿಸ್ಮ ಮಾಡಿಸಿ ಕೊಂಡಾಗ ಆತನ ಮರಣದಲ್ಲಿ ಪಾಲುಗಾರರಾಗು ವದಕ್ಕೆ ಆತನೊಂದಿಗೆ ಹೂಣಲ್ಪಟ್ಟೆವು; ಕ್ರಿಸ್ತನು ತಂದೆಯ ಮಹಿಮೆಯಿಂದ ಹೇಗೆ ಸತ್ತವರೊಳಗಿಂದ ಎಬ್ಬಿಸಲ್ಪಟ್ಟನೋ ಹಾಗೆಯೇ ನಾವು ಕೂಡ ಜೀವ ದಿಂದೆದ್ದು ನೂತನ ಜೀವದಲ್ಲಿ ನಡೆದುಕೊಳ್ಳಬೇಕು.
5 ಹೇಗಂದರೆ ಆತನ ಮರಣದ ಹೋಲಿಕೆಯಲ್ಲಿ ನಾವು ಒಟ್ಟಾಗಿ ನೆಲೆಸಿದ್ದರೆ

ಆತನ ಪುನರುತ್ಥಾನದ ಹೋಲಿಕೆ
ಯಲ್ಲಿಯೂ ಇರುವೆವು.
6 ಪಾಪದ ಶರೀರವು ನಾಶ ವಾಗಿ ನಾವು
ಇನ್ನೂ ಪಾಪಕ್ಕೆ ದಾಸರಾಗಿರದಂತೆ ನಮ್ಮ ಹಳೇ
ಮನುಷ್ಯನು ಕ್ರಿಸ್ತನ ಕೂಡ ಶಿಲುಬೆಗೆ
ಹಾಕಲ್ಪಟ್ಟ ನೆಂದು ತಿಳಿದಿದ್ದೇವೆ.
7 ಯಾಕಂದರೆ ಸತ್ತವನು ಪಾಪ ದಿಂದ
ಬಿಡುಗಡೆ ಹೊಂದಿದ್ದಾನೆ.
8 ಇದಲ್ಲದೆ ನಾವು ಕ್ರಿಸ್ತನೊಡನೆ ಸತ್ತ ಪಕ್ಷದಲ್ಲಿ
ಆತನೊಡನೆ ನಾವು ಸಹ ಜೀವಿಸುವೆವೆಂದು
ನಂಬು ತ್ತೇವೆ.
9 ಯಾಕಂದರೆ ಕ್ರಿಸ್ತನು ಸತ್ತಮೇಲೆ ಜೀವಿತ
ನಾಗಿ ಎದ್ದು ಬಂದದ್ದರಿಂದ ಆತನು ಇನ್ನು

ಮುಂದೆ ಸಾಯತಕ್ಕವನಲ್ಲ; ಮರಣವು ಇನ್ನು
ಮುಂದೆ ಆತ ನನ್ನು ಆಳುವದಿಲ್ಲವೆಂದು
ನಮಗೆ ತಿಳಿದದೆ.
10 ಆತನು ಸತ್ತಿದ್ದರಲ್ಲಿ ಪಾಪಕ್ಕಾಗಿ ಒಂದೇ
ಸಾರಿ ಸತ್ತನು. ಆದರೆ ಆತನು
ಜೀವಿಸುವದರಲ್ಲಿ ದೇವರಿಗಾಗಿ ಜೀವಿಸುತ್ತಾನೆ.
11 ಅದೇ ಪ್ರಕಾರ ನೀವು ಸಹ ಪಾಪದ
ಪಾಲಿಗೆ ನಿಜವಾಗಿ ಸತ್ತವರೂ ನಮ್ಮ
ಕರ್ತನಾದ ಯೇಸು ಕ್ರಿಸ್ತನ ಮೂಲಕ
ದೇವರಿಗಾಗಿ ಜಿವಿಸುವವರೂ ಎಂದು
ಎಣಿಸಿಕೊಳ್ಳಿರಿ.
12 ಹೀಗಿರುವದರಿಂದ ಸಾಯತಕ್ಕ ನಿಮ್ಮ
ದೇಹದ ಮೇಲೆ ಪಾಪವನ್ನು ಆಳಗೊಡಿಸಿ

ನೀವು ಅದರ ದುರಾಶೆಗಳಿಗೆ ಒಳಪಡಬೇಡಿರಿ;
13 ಇಲ್ಲವೆ ನೀವು ನಿಮ್ಮ ಅಂಗಗಳನ್ನು ಪಾಪಕ್ಕೆ ಒಳಪಡಿಸುವವರಾಗಿದ್ದು ಅನೀತಿಯನ್ನು ನಡಿಸುವ ಸಾಧನಗಳಾಗಮಾಡಬೇಡಿರಿ; ಆದರೆ ಸತ್ತವರೊಳಗಿಂದ ಜೀವಿಸುವವರೋ ಎಂಬಂತೆ ನೀತಿಕಾರ್ಯಗಳನ್ನು ನಡಿಸುವ ಸಾಧನಗಳನ್ನಾಗಿ ನಿಮ್ಮ ಅಂಗಗಳನ್ನು ದೇವರಿಗೆ ಒಳಪಡಿಸಿರಿ.
14 ಯಾಕಂದರೆ ಪಾಪವು ನಿಮ್ಮ ಮೇಲೆ ಪ್ರಭುತ್ವ ನಡಿಸಬಾರದು; ಕಾರಣವೇನಂದರೆ ನೀವು ನ್ಯಾಯಪ್ರಮಾಣಾಧೀನ ರಲ್ಲ, ಕೃಪೆಗೆ ಅಧೀನರಾಗಿದ್ದೀರಿ.
15 ಹಾಗಾದರೇನು? ನಾವು

ನ್ಯಾಯಪ್ರಮಾಣಾ ಧೀನರಲ್ಲ, ಕೃಪೆಗೆ
ಅಧೀನರಾಗಿದ್ದೇವೆಂದು ಪಾಪವನ್ನು
ಮಾಡಬಹುದೋ? ಹಾಗೆ ಎಂದಿಗೂ ಅಲ್ಲ.
16 ನೀವು ಯಾರಿಗೆ ದಾಸರಂತೆ
ವಿಧೇಯರಾಗುತ್ತೇವೆಂದು ನಿಮ್ಮನ್ನು
ಒಪ್ಪಿಸಿಕೊಡುತ್ತೀರೋ ಅವರಿಗೆ
ದಾಸರಾಗಿಯೇ ವಿಧೇ
ಯರಾಗಿರುವಿರೆಂಬದು ನಿಮಗೆ
ಗೊತ್ತಿಲ್ಲವೋ? ಪಾಪಕ್ಕೆ ದಾಸರಾದರೆ
ಮರಣವೇ; ಇಲ್ಲವೆ ವಿಧೇಯತ್ವಕ್ಕೆ ದಾಸ
ರಾದರೆ ನೀತಿಯೇ.
17 ಆದರೆ ನೀವು ಪಾಪಕ್ಕೆ ದಾಸ ರಾಗಿದ್ದರೂ
ನಿಮಗೆ ಒಪ್ಪಿಸಲ್ಪಟ್ಟ ಬೋಧನೆಗೆ ನೀವು

ಹೃದಯಪೂರ್ವಕವಾಗಿ ಅಧೀನರಾದದರಿಂದ ದೇವ ರಿಗೆ ಸ್ತೋತ್ರವಾಗಲಿ.
18 ಹೀಗೆ ನೀವು ಪಾಪದಿಂದ ಬಿಡುಗಡೆಯನ್ನು ಹೊಂದಿ ನೀತಿಗೆ ದಾಸರಾದಿರಿ.
19 ನಿಮ್ಮ ಶರೀರದ ಬಲಹೀನತೆಯ ದೆಸೆಯಿಂದ ಮನುಷ್ಯ ರೀತಿಯಾಗಿ ನಾನು ಮಾತನಾಡುತ್ತೇನೆ. ಅಶುದ್ಧತ್ವಕ್ಕೆ ದಾಸರನ್ನಾಗಿ ನಿಮ್ಮ ಅಂಗಗಳನ್ನು ದುಷ್ಟತ್ವ ದಿಂದ ದುಷ್ಟತ್ವಕ್ಕೆ ಒಳಪಡಿಸಿದಂತೆಯೇ ಈಗ ಪರಿಶುದ್ಧತೆ ಗಾಗಿ ನಿಮ್ಮ ಅಂಗಗಳನ್ನು ನೀತಿಗೆ ದಾಸರನ್ನಾಗಿ ಒಳಪಡಿಸಿರಿ.
20 ನೀವು ಪಾಪಕ್ಕೆ ದಾಸರಾಗಿದ್ದಾಗ ನೀತಿಯ

ಹಂಗಿನವರಾಗಿರಲಿಲ್ಲ.
21 ನೀವು ಆಗ ಮಾಡಿ ದವುಗಳಿಂದ
ನಿಮಗುಂಟಾದ ಫಲವೇನು? ಈಗ ಅವುಗಳ
ವಿಷಯದಲ್ಲಿ ನಿಮಗೆ ನಾಚಿಕೆಯುಂಟಷ್ಟೆ;
ಅವುಗಳ ಅಂತ್ಯವು ಮರಣವೇ.
22 ಈಗಲಾದರೋ ನೀವು ಪಾಪದಿಂದ
ಬಿಡುಗಡೆಯನ್ನು ಹೊಂದಿ ದೇವರಿಗೆ
ದಾಸರಾದದರಿಂದ ಪರಿಶುದ್ಧತೆಯೇ ನಿಮಗೆ
ಫಲ; ಅದರ ಅಂತ್ಯವು ನಿತ್ಯಜೀವವೇ.
23 ಯಾಕಂದರೆ ಪಾಪದ ಸಂಬಳ ಮರಣ.
ಆದರೆ ದೇವರ ದಾನವು ನಮ್ಮ ಕರ್ತನಾದ
ಯೇಸು ಕ್ರಿಸ್ತನ ಮುಖಾಂತರ ನಿತ್ಯಜೀವವು.

## ಅಧ್ಯಾಯ 7

1 ಸಹೋದರರರೇ, (ನ್ಯಾಯಪ್ರಮಾಣವನ್ನು
ತಿಳಿದವರಿಗೆ ನಾನು ಹೇಳುವದೇ ನಂದರೆ,)
ಒಬ್ಬ ಮನುಷ್ಯನು ಜೀವದಿಂದಿರುವ ತನಕ
ಅವನ ಮೇಲೆ ನ್ಯಾಯಪ್ರಮಾಣವು ಪ್ರಭುತ್ವ
ಮಾಡುತ್ತ ದೆಂಬದು ನಿಮಗೆ ಗೊತ್ತಿಲ್ಲವೇ?
2 ಗಂಡನಿರುವ ಸ್ತ್ರೀಯು ಅವನು
ಬದುಕಿರುವ ತನಕ ನ್ಯಾಯಪ್ರಮಾಣದಿಂದ
ಅವನಿಗೆ ಕಟ್ಟಲ್ಪಟ್ಟಿದ್ದಾಳೆ; ಗಂಡನು ಸತ್ತರೆ
ಆಕೆಯು ಅವನ ನ್ಯಾಯಪ್ರಮಾಣದಿಂದ
ಬಿಡುಗಡೆಯಾಗಿ ದ್ದಾಳೆ.
3 ಹೀಗಿರಲಾಗಿ ಗಂಡನು ಜೀವದಿಂದಿರುವಾಗ

ಆಕೆ ಬೇರೊಬ್ಬನನ್ನು ಮದುವೆ ಮಾಡಿಕೊಂಡರೆ ವ್ಯಭಿ ಚಾರಿಣಿ ಎಂದು ಕರೆಯಲ್ಪಡುವಳು; ಗಂಡನು ಸತ್ತರೆ ಆ ನ್ಯಾಯಪ್ರಮಾಣದಿಂದ ಆಕೆಯು ಬಿಡುಗಡೆಯಾಗಿ ದ್ದಾಳೆ. ಹೀಗೆ ಆಕೆ ಮತ್ತೊಬ್ಬನನ್ನು ಮದುವೆ ಮಾಡಿ ಕೊಂಡರೂ ವ್ಯಭಿಚಾರಿಣಿಯಲ್ಲ.
4 ಹಾಗೆಯೇ ನನ್ನ ಸಹೋದರರೇ, ನೀವು ಸಹ ಕ್ರಿಸ್ತನ ದೇಹದ ಮೂಲಕವಾಗಿ ನ್ಯಾಯಪ್ರಮಾಣದ ಪಾಲಿಗೆ ಸತ್ತಿರಿ. ದೇವರಿಗೆ ಫಲಫಲಿಸುವದಕ್ಕಾಗಿ ಮತ್ತೊಬ್ಬನನ್ನು ಅಂದರೆ ಸತ್ತುಜೀವಿತನಾಗಿ ಎದ್ದಾತನನ್ನು ಸೇರಿಕೊಂಡಿರಿ.

5 ನಾವು ಶರೀರದಲ್ಲಿದ್ದಾಗ ಪಾಪಗಳ ಇಚ್ಛೆಗಳು ನ್ಯಾಯಪ್ರಮಾಣದಿಂದಲೇ ಮರಣಕ್ಕೆ ಫಲಫಲಿಸುವ ದಕ್ಕಾಗಿ ನಮ್ಮ ಅಂಗಗಳಲ್ಲಿ ಯತ್ನಿಸುತ್ತಿದ್ದವು.
6 ಈಗಲಾದರೋ ನಮ್ಮನ್ನು ಹಿಡುಕೊಂಡಿದ್ದ ನ್ಯಾಯಪ್ರಮಾಣದ ಪಾಲಿಗೆ ನಾವು ಸತ್ತಕಾರಣ ಅದರಿಂದ ವಿಮುಕ್ತರಾಗಿದ್ದೇವೆ; ಹೀಗೆ ನಾವು ಅಕ್ಷರದ ಹಳೇ ರೀತಿಯಲ್ಲಿ ಆತನನ್ನು ಸೇವಿಸದೆ ಆತ್ಮನಿಂದ ಹೊಸ ರೀತಿಯಲ್ಲಿಯೇ ಸೇವಿಸುತ್ತೇವೆ.
7 ಹಾಗಾದರೆ ನಾವು ಏನು ಹೇಳೋಣ? ನ್ಯಾಯ ಪ್ರಮಾಣವು ಪಾಪವೋ? ಹಾಗೆ ಎಂದಿಗೂ ಅಲ್ಲ; ನ್ಯಾಯಪ್ರಮಾಣದಿಂದಲೇ

ಹೊರತು ಪಾಪವೆಂಬದು ಏನೋ ನನಗೆ ಗೊತ್ತಿರಲಿಲ್ಲ. ಯಾಕಂದರೆ--ನೀನು ಆಶಿಸಬಾರದು ಎಂದು ನ್ಯಾಯಪ್ರಮಾಣವು ಹೇಳ ದಿದ್ದರೆ ದುರಾಶೆಯೆಂದರೆ ಏನೋ ನನಗೆ ತಿಳಿಯು ತ್ತಿರಲಿಲ್ಲ.
8 ಆದರೆ ಪಾಪವು ಈ ಆಜ್ಞೆಯಿಂದ ಅನುಕೂಲ ಹೊಂದಿ ಸಕಲ ವಿಧವಾದ ದುರಾಶೆಯನ್ನು ನನ್ನಲ್ಲಿ ಹುಟ್ಟಿಸಿತು. ನ್ಯಾಯಪ್ರಮಾಣವು ಇಲ್ಲದಿರು ವಾಗ ಪಾಪವು ಸತ್ತದ್ದಾಗಿದೆ.
9 ಮೊದಲು ನಾನು ನ್ಯಾಯಪ್ರಮಾಣವಿಲ್ಲದವನಾಗಿದ್ದು ಜೀವದಿಂದಿದ್ದೆನು. ಆಜ್ಞೆಯು ಬಂದಾಗ

ಪಾಪವು ಪುನರ್ಜೀವವಾಗಿ ನಾನು ಸತ್ತೆನು.
10 ಜೀವಿಸುವದಕ್ಕಾಗಿರುವ ಆಜ್ಞೆಯೇ ಮರಣಕ್ಕಾಯಿತೆಂದು ನಾನು ಕಂಡುಕೊಂಡೆನು.
11 ಹೇಗಂದರೆ ಪಾಪವು ಆಜ್ಞೆಯಿಂದ ಅನುಕೂಲ ಹೊಂದಿ ನನ್ನನ್ನು ವಂಚಿಸಿ ಅದರ ಮೂಲಕವೇ ನನ್ನನು ಕೊಂದಿತು;
12 ಹೀಗಿರಲಾಗಿ ನ್ಯಾಯಪ್ರಮಾಣವು ಪರಿ ಶುದ್ಧವಾದದ್ದು. ಆಜ್ಞೆಯು ಪರಿಶುದ್ಧವೂ ನ್ಯಾಯವೂ ಹಿತವೂ ಆಗಿರುವಂಥದ್ದು ಸರಿ.
13 ಹಾಗಾದರೆ ಹಿತವಾದದ್ದು ನನಗೆ ಮರಣಕ್ಕೆ ಕಾರಣವಾಯಿತೋ? ಹಾಗೆ ಎಂದಿಗೂ ಅಲ್ಲ; ಆದರೆ ಪಾಪವು ಹಿತವಾದದ್ದರ ಮೂಲಕ

ನನ್ನಲ್ಲಿ ಮರಣವನ್ನು ಉಂಟುಮಾಡಿದ್ದರಿಂದ ಅದು ಪಾಪವೇ ಎಂದು ಕಾಣಿಸಿಕೊಂಡಿತು. ಹೀಗೆ ಆಜ್ಞೆಯ ಮೂಲಕ ಪಾಪವು ಅತ್ಯಧಿಕವಾದ ಪಾಪವಾಗಿ ತೋರಿಬಂತು.
14 ನ್ಯಾಯ ಪ್ರಮಾಣವು ಆತ್ಮೀಕವಾದದ್ದೆಂದು ನಾವು ಬಲ್ಲೆವು; ಆದರೆ ನಾನು ಶರೀರಾಧೀನನೂ ಪಾಪದ ಅಧೀನದಲ್ಲಿ ರುವದಕ್ಕೆ ಮಾರಲ್ಪಟ್ಟವನೂ ಆಗಿದ್ದೇನೆ.
15 ಹೇಗಂದರೆ ನಾನು ಮಾಡುವದನ್ನು ನಾನೇ ಒಪ್ಪುವದಿಲ್ಲ; ಯಾವದನ್ನು ಮಾಡಬೇಕೆಂದು ನಾನು ಇಚ್ಛೈಸುತ್ತೇನೋ ಅದನ್ನು ಮಾಡದೆ ನಾನು ವಿರೋಧಿಸುವದನ್ನು ಮಾಡುತ್ತೇನೆ.

16 ಆದರೆ ನನಗೆ ಮನಸ್ಸಿಲ್ಲದ್ದನ್ನು ಮಾಡಿ ದರೆ
ನ್ಯಾಯಪ್ರಮಾಣವು ಉತ್ತಮವಾದದ್ದೆಂದು
ಒಪ್ಪಿಕೊಂಡ ಹಾಗಾಯಿತು.
17 ಹೀಗಿರಲಾಗಿ ವಿರೋಧ ವಾದದ್ದನ್ನು
ಮಾಡುವವನು ಇನ್ನು ನಾನಲ್ಲ; ನನ್ನಲ್ಲಿ
ನೆಲೆಗೊಂಡಿರುವ ಪಾಪವೇ ಅದನ್ನು
ಮಾಡುತ್ತದೆ.
18 ಯಾಕಂದರೆ ನನ್ನಲ್ಲಿ ಅಂದರೆ ನನ್ನ
ಶರೀರದಲ್ಲಿ ಒಳ್ಳೆಯದೇನೂ
ವಾಸವಾಗಿಲ್ಲವೆಂದು ನನಗೆ ತಿಳಿದದೆ;
ಒಳ್ಳೇದನ್ನು ಮಾಡುವದಕ್ಕೆ ನನಗೇನೋ
ಮನಸ್ಸುಂಟು; ಆದರೆ ಅದನ್ನು ಮಾಡುವದು
ನನ್ನಿಂದಾಗದು.

19 ನಾನು ಇಚ್ಛೈಸುವ ಒಳ್ಳೇದನ್ನು ಮಾಡದೆ
ಇಚ್ಛೈಸದಿರುವ ಕೆಟ್ಟ ದ್ದನ್ನೇ
ಮಾಡುವವನಾಗಿದ್ದೇನೆ.
20 ಇಚ್ಛೈಸದಿರುವದನ್ನು ನಾನು ಮಾಡಿದರೆ
ಅದನ್ನು ಮಾಡಿದವನು ಇನ್ನು ನಾನಲ್ಲ. ನನ್ನಲ್ಲಿ
ನೆಲೆಗೊಂಡಿರುವ ಪಾಪವೇ ಅದನ್ನು
ಮಾಡಿತು.
21 ಹೀಗಿರಲಾಗಿ ಒಳ್ಳೆಯದನ್ನು ಮಾಡ
ಲಿಚ್ಛೈಸುವ ನನಗೆ ಕೆಟ್ಟದ್ದಾಗಿರುವ ನಿಯಮವು
ನನ್ನಲ್ಲಿ ಕಾಣಬರುತ್ತದೆ.
22 ಹೀಗಿದ್ದಾಗ್ಯೂ ಒಳಮನುಷ್ಯನಿಗನು
ಗುಣವಾಗಿ ದೇವರ ನಿಯಮದಲ್ಲಿ
ಆನಂದಪಡುವವ ನಾಗಿದ್ದೇನೆ.

23 ಆದರೆ ನನ್ನ ಅಂಗಗಳಲ್ಲಿ ಬೇರೊಂದು
ನಿಯಮವುಂಟೆಂದು ನಾನು ನೋಡುತ್ತೇನೆ;
ಅದು ನನ್ನ ಮನಸ್ಸಿನಲ್ಲಿರುವ ನಿಯಮಕ್ಕೆ
ವಿರೋಧವಾಗಿ ಕಾದಾಡಿ ನನ್ನನ್ನು ಸೆರೆ
ಹಿಡಿದು ನನ್ನ ಅಂಗಗಳಲ್ಲಿರುವ ಪಾಪದ
ನಿಯಮಕ್ಕೆ ವಶಮಾಡುವಂಥದ್ದಾಗಿದೆ.
24 ಅಯ್ಯೋ, ನಾನು ಎಂಥ ನಿರ್ಗತಿಕನಾದ
ಮನುಷ್ಯನು! ಇಂಥ ಮರಣಕ್ಕೆ ಒಳಗಾದ ಈ
ದೇಹ ದಿಂದ ನನ್ನನ್ನು ಬಿಡಿಸುವವನು
ಯಾರು?
25 ನಾನು ನಮ್ಮ ಕರ್ತನಾದ ಯೇಸು ಕ್ರಿಸ್ತನ
ಮೂಲಕ ದೇವರಿಗೆ ಸ್ತೋತ್ರ ಮಾಡುತ್ತೇನೆ;
ಹೀಗೆ ನನ್ನಷ್ಟಕ್ಕೆ ನಾನೇ ಮನಸ್ಸಿನಿಂದ ದೇವರ

ನಿಯಮಕ್ಕೂ ಶರೀರದಿಂದ ಪಾಪವೆಂಬ ನಿಯಮಕ್ಕೂ ಆಳಾಗಿದ್ದೇನೆ.

## ಅಧ್ಯಾಯ 8

1 ಆದದರಿಂದ ಕ್ರಿಸ್ತ ಯೇಸುವಿನಲ್ಲಿ
ರುವವರಿಗೆ ಅಪರಾಧ ನಿರ್ಣಯವು ಈಗ
ಇಲ್ಲವೇ ಇಲ್ಲ; ಇವರು ಶರೀರಕ್ಕನುಸಾರವಾಗಿ
ಅಲ್ಲ, ಆತ್ಮನಿಗನುಸಾರವಾಗಿಯೇ
ನಡೆಯುವವರಾಗಿದ್ದಾರೆ.
2 ಜೀವವನ್ನುಂಟು ಮಾಡುವ ಆತ್ಮನ
ನಿಯಮವು ಕ್ರಿಸ್ತ ಯೇಸುವಿನಲ್ಲಿ ನನ್ನನ್ನು
ಪಾಪ ಮರಣಗಳ ನಿಯಮ ದಿಂದ ಬಿಡಿಸಿತು.

3 ನ್ಯಾಯಪ್ರಮಾಣವು ಶರೀರದ ಮೂಲಕ ನಿರ್ಬಲವಾಗಿ ಯಾವದನ್ನು ಮಾಡಲಾರದೆ ಇತ್ತೋ ಅದನ್ನು ದೇವರೇ ಮಾಡಿದನು; ಹೇಗಂದರೆ ಆತನು ತನ್ನ ಸ್ವಂತ ಮಗನನ್ನು ಪಾಪಶರೀರದ ಹೋಲಿಕೆ ಯಲ್ಲಿ ಕಳುಹಿಸಿ ಪಾಪಕ್ಕಾಗಿ ಆ ಶರೀರದಲ್ಲಿಯೇ ಪಾಪವನ್ನು ದಂಡಿಸಿದನು.

4 ಹೀಗೆ ಶರೀರಕ್ಕನುಸಾರ ವಾಗಿ ನಡೆಯದೆ ಆತ್ಮನಿಗನುಸಾರವಾಗಿ ನಡೆಯುವವ ರಾದ ನಮ್ಮಲ್ಲಿ ನ್ಯಾಯಪ್ರಮಾಣದ ನೀತಿಯು ನೆರ ವೇರುವದು.

5 ಶರೀರವನ್ನು ಅನುಸರಿಸುವವರು ಅದಕ್ಕೆ ಸಂಬಂಧ ಪಟ್ಟವುಗಳ ಮೇಲೆ ಮನಸ್ಸಿಡುತ್ತಾರೆ;

ಆತ್ಮನನ್ನನುಸರಿ ಸುವವರಾದರೋ ಆತ್ಮನಿಗೆ ಸಂಬಂಧಪಟ್ಟವುಗಳ ಮೇಲೆ ಮನಸ್ಸಿಡುತ್ತಾರೆ.
6 ಶರೀರಕ್ಕನುಸಾರವಾದ ಮನಸ್ಸು ಮರಣ: ಆತ್ಮೀಕವಾದ ಮನಸ್ಸುಜೀವವೂ ಸಮಾಧಾನವೂ ಆಗಿದೆ.
7 ಶರೀರ ಸಂಬಂಧವಾದ ಮನಸ್ಸು ದೇವರಿಗೆ ಶತ್ರುತ್ವವು; ಕಾರಣವೇನಂದರೆ ಅಂಥ ಮನಸ್ಸು ದೇವರ ನಿಯಮಕ್ಕೆ ಒಳಪಡುವದಿಲ್ಲ, ಒಳಪಡುವದಕ್ಕಾಗುವದೂ ಇಲ್ಲ.
8 ಹೀಗಿರಲಾಗಿ ಶರೀರಾಧೀನರು ದೇವರನ್ನು ಮೆಚ್ಚಿಸಲಾರರು.
9 ನೀವಾ ದರೋ ನಿಮ್ಮಲ್ಲಿ ದೇವರಾತ್ಮನು ವಾಸವಾಗಿರುವದಾದರೆ ಶರೀರಾಧೀನರಲ್ಲ,

ಆತ್ಮನಿಗೆ ಅಧೀನರಾಗಿದ್ದೀರಿ. ಯಾವ
ನಿಗಾದರೂ ಕ್ರಿಸ್ತನ ಆತ್ಮನು ಇಲ್ಲದಿದ್ದರೆ ಅವನು
ಕ್ರಿಸ್ತನವ ನಲ್ಲ.
10 ಆದರೆ ಕ್ರಿಸ್ತನು ನಿಮ್ಮಲ್ಲಿದ್ದರೆ ದೇಹವು
ಪಾಪದ ದೆಸೆಯಿಂದ ಸತ್ತದ್ದಾಗಿದ್ದರೂ ಆತ್ಮವು
ನೀತಿಯ ದೆಸೆ ಯಿಂದ ಜೀವವುಳ್ಳದ್ದಾಗಿದೆ.
11 ಯೇಸುವನ್ನು ಸತ್ತವ ರೊಳಗಿಂದ
ಎಬ್ಬಿಸಿದಾತನ ಆತ್ಮನು ನಿಮ್ಮಲ್ಲಿ ವಾಸವಾಗಿ
ದ್ದರೆ ಕ್ರಿಸ್ತನನ್ನು ಸತ್ತವರೊಳಗಿಂದ
ಎಬ್ಬಿಸಿದಾತನು ನಿಮ್ಮಲ್ಲಿ ವಾಸವಾಗಿರುವ ತನ್ನ
ಆತ್ಮನ ಮೂಲಕ ನಿಮ್ಮ ಮರ್ತ್ಯ ದೇಹಗಳನ್ನು
ಸಹ ಬದುಕಿಸುವನು.
12 ಹೀಗಿರಲಾಗಿ ಸಹೋದರರೇ,

ಶರೀರಕ್ಕನುಸಾರ ವಾಗಿ ಜೀವಿಸುವದಕ್ಕೆ ನಾವು ಶರೀರಕ್ಕೆ ಋಣಸ್ಥರಲ್ಲ.
13 ನೀವು ಶರೀರಭಾವವನ್ನು ಅನುಸರಿಸಿದರೆ ಸಾಯುವಿರಿ; ಆದರೆ ನೀವು ಆತ್ಮನಿಂದ ದೇಹದ ಕ್ರಿಯೆಗಳನ್ನು ಸಾಯಿಸುವದಾದರೆ ಜೀವಿಸುವಿರಿ.
14 ಯಾಕಂದರೆ ಯಾರಾರು ದೇವರ ಆತ್ಮನಿಂದ ನಡಿಸಲ್ಪಡುತ್ತಾರೋ ಅವರು ದೇವರ ಪುತ್ರರಾಗಿದ್ದಾರೆ.
15 ನೀವು ತಿರಿಗಿ ಭಯವುಳ್ಳವರಾಗಿರುವಂತೆ ದಾಸನ ಭಾವವನ್ನು ಹೊಂದಿದವರಲ್ಲ; ಆದರೆ ದತ್ತುಪುತ್ರ ಸ್ವೀಕಾರದ ಆತ್ಮನನ್ನು ಹೊಂದಿರುವದರಿಂದ ದೇವರನ್ನು ನಾವು

ಅಪ್ಪಾ, ತಂದೆಯೇ ಎಂದು ಕೂಗುತ್ತೇವೆ.
16 ನಾವು ದೇವರ ಮಕ್ಕಳಾಗಿದ್ದೇವೆಂದು ಆತ್ಮನು ತಾನೇ ನಮ್ಮ ಆತ್ಮದೊಂದಿಗೆ ಸಾಕ್ಷಿ ಹೇಳುತ್ತಾನೆ.
17 ಮಕ್ಕಳಾ ಗಿದ್ದರೆ ಬಾಧ್ಯರಾಗಿದ್ದೇವೆ; ದೇವರಿಗೆ ಬಾಧ್ಯರು, ಕ್ರಿಸ್ತ ನೊಂದಿಗೆ ಸಹ ಬಾಧ್ಯರು; ಆತನೊಂದಿಗೆ ಶ್ರಮೆ ಯನ್ನನುಭವಿಸುವದಾದರೆ ಒಟ್ಟಾಗಿ ನಾವು ಸಹ ಮಹಿಮೆಯನ್ನು ಹೊಂದುವೆವು.
18 ನಮ್ಮಲ್ಲಿ ಪ್ರತ್ಯಕ್ಷವಾಗಲಿರುವ ಮಹಿಮೆಯೊಂದಿಗೆ ಈಗಿನ ಕಾಲದ ಶ್ರಮೆಗಳನ್ನು ಹೋಲಿಸುವದು ಯೋಗ್ಯ ವಲ್ಲವೆಂದು ನಾನು ಎಣಿಸುತ್ತೇನೆ.

19 ದೇವಪುತ್ರರ ಪ್ರತ್ಯಕ್ಷತೆಯನ್ನು ಸೃಷ್ಟಿಯು
ಲವಲವಿಕೆಯಿಂದ ಎದುರು ನೋಡುತ್ತಾ
ಇದೆ.
20 ಸೃಷ್ಟಿಯು ವ್ಯರ್ಥತ್ವಕ್ಕೆ ಒಳಗಾದದ್ದು
ಸ್ವೇಛ್ಟೆಯಿಂದಲ್ಲ, ಅದನ್ನು ಒಳಪಡಿಸಿದಾತನ
ಮುಖಾಂ ತರ ನಿರೀಕ್ಷೆಯಲ್ಲಿಯೇ.
21 ಸೃಷ್ಟಿಯು ತಾನೇ ದೇವರ ಮಕ್ಕಳ
ಮಹಿಮೆಯ ಸ್ವಾತಂತ್ರ್ಯತೆಯಲ್ಲಿ ಸೇರುವಂತೆ
ನಾಶನದ ದಾಸತ್ವದಿಂದ ಬಿಡುಗಡೆ
ಹೊಂದುವದು.
22 ಹಿಗೆ ಸರ್ವಸೃಷ್ಟಿಯು ಇಂದಿನ ವರೆಗೂ
ನರಳುತ್ತಾ ಪ್ರಸವವೇದನೆ ಪಡುತ್ತದೆಯೆಂದು
ನಾವು ಬಲ್ಲೆವು.

23 ಇದು ಮಾತ್ರವಲ್ಲದೆ ಆತ್ಮನ ಪ್ರಥಮ ಫಲವನ್ನು ಹೊಂದಿದ ನಾವು ಸಹ ದತ್ತುಪುತ್ರ ಸ್ವೀಕಾರವನ್ನು ಅಂದರೆ ದೇಹಕ್ಕೆ ಬರಬೇಕಾದ ವಿಮೋಚನೆಯನ್ನು ಎದುರುನೋಡುತ್ತಾ ನಮ್ಮೊಳಗೆ ನಾವೇ ಮೂಲ್ಗುತ್ತೇವೆ.
24 ನಾವು ನಿರೀಕ್ಷೆಯಿಂದ ರಕ್ಷಣೆಯನ್ನು ಹೊಂದುವವ ರಾಗಿದ್ದೇವೆ; ಕಾಣುವಂಥ ನಿರೀಕ್ಷೆಯು ನಿರೀಕ್ಷೆಯಲ್ಲ; ಒಬ್ಬನು ಎದುರು ನೋಡುವದು ಪ್ರತ್ಯಕ್ಷವಾಗಿದ್ದರೆ ಇನ್ನು ನಿರೀಕ್ಷಿಸುವದು ಯಾಕೆ?
25 ಕಾಣದಿರುವದನ್ನು ನಾವು ನಿರೀಕ್ಷಿಸುವದಾಗಿದ್ದರೆ ಅದಕ್ಕಾಗಿ ನಾವು ತಾಳ್ಮೆ ಯಿಂದ ಕಾದುಕೊಂಡಿರುತ್ತೇವೆ.

26 ಹಾಗೆಯೇ ಆತ್ಮನು ಸಹ ನಮ್ಮ
ಬಲಹೀನತೆ ಗಳಿಗೆ ಸಹಾಯಮಾಡುತ್ತಾನೆ;
ಹೇಗಂದರೆ ನಾವು ತಕ್ಕ ಪ್ರಕಾರ ಏನು
ಬೇಡಿಕೊಳ್ಳಬೇಕೋ ನಮಗೆ
ಗೊತ್ತಿಲ್ಲವಾದ್ದರಿಂದ ಆತ್ಮನು ತಾನೇ
ಉಚ್ಚರಿಸಲಾಗ ದಂಥ ನರಳಾಟದಿಂದ
ನಮಗೋಸ್ಕರ ವಿಜ್ಞಾಪನೆ ಮಾಡುತ್ತಾನೆ.
27 ಆದರೆ ಹೃದಯಗಳನ್ನು ಶೋಧಿಸು
ವಾತನಿಗೆ ಆತ್ಮನ ಮನೊಭಾವವು ಏನೆಂದು
ತಿಳಿದದೆ; ಆ ಆತ್ಮನು ದೇವರ
ಚಿತ್ತಾನುಸಾರವಾಗಿ ಪರಿಶುದ್ಧರಿ ಗೋಸ್ಕರ
ವಿಜ್ಞಾಪನೆ ಮಾಡುತ್ತಾನೆ.
28 ಇದಲ್ಲದೆ ದೇವರ ಸಂಕಲ್ಪದ ಮೇರೆಗೆ

ಕರೆಯ ಲ್ಪಟ್ಟು ಆತನನ್ನು ಪ್ರೀತಿಸುವವರ ಒಳ್ಳೇದಕ್ಕಾಗಿ ಎಲ್ಲವು ಗಳು ಒಟ್ಟಾಗಿ ಸಂಭವಿಸುತ್ತವೆಯೆಂದು ನಾವು ಬಲ್ಲೆವು.
29 ಆತನು ಅನೇಕ ಸಹೋದರರಲ್ಲಿ ತನ್ನ ಮಗನು ಜ್ಯೇಷ್ಠಪುತ್ರನಾಗಿರಬೇಕೆಂದು ತಾನು ಯಾರನ್ನು ಮೊದಲು ತಿಳುಕೊಂಡನೋ ಅವರನ್ನು ತನ್ನ ಮಗನ ಸಾರೂಪ್ಯವುಳ್ಳವರಾಗುವಂತೆ ಮೊದಲೇ ನೇಮಿಸಿ ದನು.
30 ಇದಲ್ಲದೆ ಯಾರನ್ನು ಮೊದಲು ನೇಮಿಸಿ ದನೋ ಅವರನ್ನು ಕರೆದನು; ಯಾರನ್ನು ಕರೆದನೋ ಅವರನ್ನು ನೀತಿವಂತರೆಂದು ನಿರ್ಣಯಿಸಿದನು; ಯಾರನ್ನು

ನೀತಿವಂತರೆಂದು ನಿರ್ಣಯಿಸಿದನೋ ಅವರನ್ನು ಮಹಿಮೆಪಡಿಸಿದನು.
31 ಹಾಗಾದರೆ ಈ ವಿಷಯಗಳಲ್ಲಿ ನಾವು ಏನು ಹೇಳೋಣ? ದೇವರು ನಮ್ಮ ಕಡೆ ಇದ್ದರೆ ನಮ್ಮನ್ನು ಎದುರಿಸುವವರು ಯಾರು?
32 ದೇವರು ತನ್ನ ಸ್ವಂತ ಮಗನನ್ನು ಉಳಿಸಿಕೊಳ್ಳದೆ ಆತನನ್ನು ನಮ್ಮೆಲ್ಲರಿಗೋಸ್ಕರ ಒಪ್ಪಿಸಿಕೊಟ್ಟ ಮೇಲೆ ಆತನೊಂದಿಗೆ ಎಲ್ಲವುಗಳನ್ನು ಉಚಿತವಾಗಿ ನಮಗೆ ಕೊಡದೆ ಇರುವನೇ?
33 ದೇವರಾದುಕೊಂಡವರ ಮೇಲೆ ಯಾರು ತಪ್ಪು ಹೊರಿಸಾರು? ದೇವರೇ ನಮ್ಮನ್ನು ನೀತಿವಂತರೆಂದು

ನಿರ್ಣಯಿಸುವವನಾಗಿದ್ದಾನೆ.
34 ಅಪರಾಧಿಗಳೆಂದು ನಿರ್ಣಯಿಸುವವರು ಯಾರು? ಕ್ರಿಸ್ತನು ಮರಣವನ್ನು ಹೊಂದಿದ್ದಲ್ಲದೆ (ಜೀವಿತನಾಗಿ) ಎದ್ದು ದೇವರ ಬಲಗಡೆಯಲ್ಲಿ ನಮಗೋಸ್ಕರ ವಿಜ್ಞಾಪನೆ ಮಾಡು ವಾತನಾಗಿದ್ದಾನೆ;
35 ಕ್ರಿಸ್ತನ ಪ್ರೀತಿಯಿಂದ ನಮ್ಮನ್ನು ಅಗಲಿಸುವವರು ಯಾರು? ಕಷ್ಟವೋ ಸಂಕಟವೋ ಹಿಂಸೆಯೋ ಬರಗಾಲವೋ ವಸ್ತ್ರವಿಲ್ಲದಿರುವದೋ ಗಂಡಾಂತರವೋ ಖಡ್ಗವೋ?
36 ನಾವು ನಿನ್ನ ನಿಮಿತ್ತ ದಿನವೆಲ್ಲಾ ಕೊಲೆಗೆ ಗುರಿಯಾಗಿದ್ದೇವೆ; ನಾವು ಕೊಯ್ಗುರಿಗಳಂತೆ

ಎಣಿಸಲ್ಪಡುತ್ತಿದ್ದೇವೆ ಎಂದು ಬರೆಯಲ್ಪಟ್ಟಿದೆ.
37 ಹೌದು, ನಮ್ಮನ್ನು ಪ್ರಿತಿಸಿದಾತನ ಮೂಲಕವಾಗಿ ನಾವು ಈ ಎಲ್ಲವುಗಳಲ್ಲಿ ಜಯಶಾಲಿ ಗಳಿಗಿಂತಲೂ ಹೆಚ್ಚಿನವರಾಗಿದ್ದೇವೆ.
38 ಹೇಗಂದರೆ ಮರಣವಾಗಲಿ ಜೀವವಾಗಲಿ ದೂತರಾಗಲಿ ರಾಜತ್ವಗಳಾಗಲಿ ಅಧಿಕಾರಗಳಾಗಲಿ ಈಗಿನವುಗಳಾ ಗಲಿ ಮುಂಬರುವವುಗಳಾಗಲಿ
39 ಉನ್ನತವಾಗಲಿ ಅಗಾಧವಾಗಲಿ ಬೇರೆ ಯಾವ ಸೃಷ್ಟಿಯಾಗಲಿ ನಮ್ಮನ್ನು ನಮ್ಮ ಕರ್ತನಾದ ಕ್ರಿಸ್ತ ಯೇಸುವಿನಲ್ಲಿರುವ ದೇವರ ಪ್ರೀತಿಯಿಂದ ಅಗಲಿಸಲಾರವೆಂದು ನನಗೆ

ನಿಶ್ಚಯ ಉಂಟು.

## ಅಧ್ಯಾಯ 9

1 ಈ ಮಾತನ್ನು ನಾನು ಸುಳ್ಳಾಡದೆ ಕ್ರಿಸ್ತನಲ್ಲಿ
ಸತ್ಯವಾಗಿ ಹೇಳುತ್ತೇನೆ; ಪವಿ ತ್ರಾತ್ಮನಲ್ಲಿ ನನ್ನ
ಮನಸ್ಸಾಕ್ಷಿಯು ನನಗೆ ಸಾಕ್ಷಿ ಕೊಡುತ್ತದೆ.
2 ಅದೇನಂದರೆ ನನ್ನ ಹೃದಯದಲ್ಲಿ ದೊಡ್ಡ
ಭಾರವೂ ಎಡೆಬಿಡದ ದುಃಖವೂ ಉಂಟು.
3 ಶರೀರ ಸಂಬಂಧ ವಾಗಿ ನನ್ನ
ಸ್ವಜನರಾಗಿರುವ ನನ್ನ ಸಹೋದರರಿಗೋಸ್ಕರ
ನಾನೇ ಕ್ರಿಸ್ತನಿಂದ ಅಗಲಿ
ಶಾಪಗ್ರಸ್ತನಾಗುವದಕ್ಕೆ ಒಪ್ಪಿಕೊಂಡೇನು.

4 ಇವರು ಇಸ್ರಾಯೇಲ್ಯರು; ದತ್ತುಪುತ್ರ
ಸ್ವಿಕಾರವೂ ಮಹಿಮೆಯೂ ಒಡಂಬಡಿ
ಕೆಗಳೂ ನ್ಯಾಯಪ್ರಮಾಣ ಕೊಡೋಣವೂ
ದೇವರ ಸೇವೆಯೂ ವಾಗ್ದಾನಗಳೂ ಇವರಿಗೆ
ಸಂಬಂಧ ಪಟ್ಟವುಗಳು.
5 ಪಿತೃಗಳು ಇವರಿಗೆ ಸಂಬಂಧಪಟ್ಟವರೇ;
ಶರೀರ ಸಂಬಂಧವಾಗಿ ಕ್ರಿಸ್ತನು ಇವರಿಂದಲೇ
ಬಂದನು; ಆತನು ಎಲ್ಲಾದರ ಮೇಲೆ
ಇರುವಾತನಾಗಿದ್ದು ನಿರಂತರಕ್ಕೂ ಸ್ತುತಿ
ಹೊಂದತಕ್ಕ ದೇವರಾಗಿದ್ದಾನೆ. ಆಮೆನ್.
6 ದೇವರ ಮಾತು ನಿರರ್ಥಕವಾಯಿತೆಂತಲ್ಲ;
ಯಾಕಂದರೆ ಇಸ್ರಾಯೇಲ್ಯರಿಗೆ
ಸಂಬಂಧಪಟ್ಟವ ರೆಲ್ಲರೂ ಇಸ್ರಾಯೇಲ್ಯರಲ್ಲ;

7 ಇಲ್ಲವೆ ಅವರು ಅಬ್ರಹಾಮನ
ಸಂತತಿಯವರಾದ ಕಾರಣ ಅವರೆ ಲ್ಲರೂ
ಮಕ್ಕಳಲ್ಲ; ಆದರೆ--ಇಸಾಕನಲ್ಲಿಯೇ ನಿನ್ನ
ಸಂತ ತಿಯು ಕರೆಯಲ್ಪಡುವದು ಎಂಬದೇ.
8 ಅಂದರೆ--ಶರೀರ ಸಂಬಂಧವಾದ ಮಕ್ಕಳು
ದೇವರ ಮಕ್ಕಳಲ್ಲ; ಆದರೆ ವಾಗ್ದಾನದ
ಮಕ್ಕಳೇ ಆತನ ಸಂತತಿಯೆಂದು
ಎಣಿಸಲ್ಪಟ್ಟಿದ್ದಾರೆ.
9 ಈ ವಾಗ್ದಾನದ ಮಾತೇನಂ ದರೆ--
ಮುಂದಿನ ವರುಷದ ಇದೇ ಕಾಲದಲ್ಲಿ ನಾನು
ಬರುವೆನು. ಆಗ ಸಾರಳಿಗೆ ಮಗನು
ಇರುವನು ಎಂಬದೇ.
10 ಇದು ಮಾತ್ರವಲ್ಲದೆ ರೆಬೆಕ್ಕಳು ಸಹ

ಒಬ್ಬನಿಂದ ಅಂದರೆ ನಮ್ಮ ಪಿತೃವಾದ ಇಸಾಕನಿಂದ ಗರ್ಭಿಣಿಯಾದಾಗ

11 (ಮಕ್ಕಳಿನ್ನೂ ಹುಟ್ಟದಿರುವಾಗ ಮತ್ತು ಒಳ್ಳೇದನ್ನಾಗಲಿ ಕೆಟ್ಟದ್ದನ್ನಾಗಲಿ ಮಾಡದಿರುವಾಗ ಆಯ್ಕೆಯ ಪ್ರಕಾರ ದೇವರ ಸಂಕಲ್ಪವು ಸ್ಥಿರಗೊಳ್ಳು ವಂತೆ ಕ್ರಿಯೆಗಳಿಂದಲ್ಲ, ಆದರೆ ಕರೆದಾತನಿಂದಲೇ)

12 ಹಿರಿಯುವನು ಕಿರಿಯುವನಿಗೆ ಸೇವೆ ಮಾಡುವವನು ಎಂದು ಆಕೆಗೆ ಹೇಳಲ್ಪಟ್ಟಿದೆ.

13 ಇದಕ್ಕನುಸಾರ-- ನಾನು ಯಾಕೋಬನನ್ನು ಪ್ರೀತಿಸಿದೆನು ಮತ್ತು ಏಸಾವನನ್ನು ಹಗೆಮಾಡಿದೆನು ಎಂದು ಬರೆಯಲ್ಪಟ್ಟಿದೆ.

14 ಹಾಗಾದರೆ ನಾವು ಏನು ಹೇಳೋಣ?
ದೇವರಲ್ಲಿ ಅನೀತಿ ಉಂಟೋ? ಹಾಗೆ
ಎಂದಿಗೂ ಇಲ್ಲ.
15 ಆತನು ಮೋಶೆಗೆ--ಯಾವನ ಮೇಲೆ
ನನಗೆ ಕರುಣೆ ಇದೆಯೋ ಅವನನ್ನು
ಕರುಣಿಸುವೆನು ಮತ್ತು ಯಾವನ ಮೇಲೆ
ನನಗೆ ದಯೆ ಇದೆಯೋ ಅವನಿಗೆ ದಯೆ
ತೋರಿಸುವೆನು ಎಂದು ಹೇಳುತ್ತಾನೆ.
16 ಹೀಗಿರುವಾಗ ಅದು
ಇಚ್ಛಿಸುವವನಿಂದಾಗಲೀ
ಪ್ರಯಾಸಪಡುವವನಿಂದಾಗಲೀ ಆಗದೆ
ಕರುಣೆ ತೋರಿ ಸುವ ದೇವರಿಂದಲೇ
ಆಗುವದು.

17 ಬರಹವು ಫರೋಹನಿಗೆ--ನನ್ನ ಬಲವನ್ನು
ನಿನ್ನಲ್ಲಿ ತೋರಿಸುವ ಹಾಗೆಯೂ ನನ್ನ
ನಾಮವು ಭೂಮಿಯ ಎಲ್ಲಾ ಕಡೆಯಲ್ಲಿ
ಪ್ರಸಿದ್ಧಿ ಹೊಂದಬೇಕೆಂಬ ಉದ್ದೇಶದಿಂದಲೂ
ನಾನು ನಿನ್ನನ್ನು ಉನ್ನತ ಸ್ಥಿತಿಗೆ ತಂದಿದ್ದೇನೆ
ಎಂದು ಹೇಳುತ್ತದೆ.
18 ಆದದರಿಂದ ಆತನು ಯಾವನನ್ನು
ಕರುಣಿಸಬೇಕೆಂದಿ ರುವನೋ ಅವನನ್ನು
ಕರುಣಿಸುವನು; ಯಾವನನ್ನು
ಕಠಿಣಪಡಿಸಬೇಕೆಂದಿರುವನೋ ಅವನನ್ನು
ಕಠಿಣ ಪಡಿಸುವನು.
19 ಆಗ ನೀನು ನನಗೆ--ಹಾಗಾದರೆ ಆತನು
ಇನ್ನು ತಪ್ಪು ಕಂಡುಹಿಡಿಯುವದು ಹೇಗೆ?

ಆತನ ಚಿತ್ತವನ್ನು ಎದುರಿಸುವದು ಯಾರಿಂದಾದೀತು ಎಂದು ಕೇಳುವಿ.
20 ಆದರೆ ಓ ಮನುಷ್ಯನೇ, ದೇವರಿಗೆ ಎದುರು ಮಾತನಾಡುವದಕ್ಕೆ ನೀನು ಯಾರು? ರೂಪಿಸಲ್ಪಟ್ಟದ್ದು ರೂಪಿಸಿದವನಿಗೆ--ನನ್ನನ್ನು ಹೀಗೇಕೆ ಮಾಡಿದೆ ಎಂದು ಕೇಳುವದುಂಟೇ?
21 ಒಂದು ಪಾತ್ರೆಯನ್ನು ಗೌರ ವಕ್ಕೂ ಇನ್ನೊಂದನ್ನು ಅಗೌರವಕ್ಕೂ ಒಂದೇ ಮುದ್ದೆ ಯಿಂದ ಮಾಡುವದಕ್ಕೆ ಕುಂಬಾರನಿಗೆ ಮಣ್ಣಿನ ಮೇಲೆ ಅಧಿಕಾರವಿಲ್ಲವೋ?
22 ಹೀಗಿರಲು ದೇವರು ತನ್ನ ಕೋಪವನ್ನು ತೋರಿಸುವದಕ್ಕೂ ತನ್ನ ಬಲವನ್ನು

ಪ್ರಸಿದ್ಧಿಪಡಿಸುವದಕ್ಕೂ ಮನಸ್ಸುಳ್ಳವನಾಗಿ ನಾಶನಕ್ಕೆ ಯೋಗ್ಯವಾಗಿರುವ ಕೋಪದ ಪಾತ್ರೆಗಳಿಗಾಗಿ ಬಹು ದೀರ್ಘಶಾಂತಿಯಿಂದ ತಾಳಿಕೊಂಡು
23 ಮುಂಚಿತ ವಾಗಿಯೇ ತಾನು ಮಹಿಮೆಗೋಸ್ಕರ ಸಿದ್ಧಮಾಡಿದ ಕರುಣೆಯ ಪಾತ್ರೆಗಳಿಗೆ ತನ್ನ ಮಹಿಮಾತಿಶಯವನ್ನು ತಿಳಿಯಪಡಿಸುವವನಾಗಿ
24 ಯೆಹೂದ್ಯರೊಳಗಿಂದ ನಮ್ಮನ್ನು ಮಾತ್ರವಲ್ಲದೆ ಅನ್ಯಜನಾಂಗಗಳವರೊಳಗಿಂದಲೂ ಆತನು ಕರೆದಿದ್ದರೆ ಏನು?
25 ಇದಲ್ಲದೆ ಆತನು--ನನ್ನ ಜನರಲ್ಲದವರನ್ನು ನನ್ನ ಜನರೆಂದೂ ನನಗೆ ಪ್ರಿಯಳಲ್ಲದವಳನ್ನು

ಪ್ರಿಯಳೆಂದೂ ಕರೆಯುವೆನು ಎಂದು ಹೋಶೇಯನ ಮೂಲಕ ಹೇಳುತ್ತಾನೆ.
26 ಯಾವ ಸ್ಥಳದಲ್ಲಿ ಅವರಿಗೆ--ನೀವು ನನ್ನ ಜನರಲ್ಲ ಎಂದು ಎಲ್ಲಿ ಹೇಳಲ್ಪಟ್ಟಿದೆಯೋ ಅಲ್ಲಿಯೇ ಅವರು ಜೀವಿಸುವ ದೇವರ ಮಕ್ಕಳೆಂದು ಕರೆಯಲ್ಪಡುವರು ಎಂಬದು.
27 ಯೆಶಾಯನು ಸಹ ಇಸ್ರಾಯೇಲ್ಯರ ವಿಷಯವಾಗಿ--ಇಸ್ರಾಯೇಲ್ಯರ ಮಕ್ಕಳ ಸಂಖ್ಯೆಯು ಸಮುದ್ರದ ಮರಳಿನೋಪಾದಿಯಲ್ಲಿದ್ದರೂ ಒಂದು ಅಂಶ ಮಾತ್ರ ರಕ್ಷಣೆ ಹೊಂದುವದು ಎಂದು ಕೂಗಿ ಹೇಳುತ್ತಾನೆ.
28 ಆತನು ನೀತಿಯಲ್ಲಿ ಕಾರ್ಯವನ್ನು

ಕ್ಲುಪ್ತಮಾಡಿ ಪೂರ್ತಿಗೊಳಿಸುತ್ತಾನೆ; ಕಾರಣವೇ ನಂದರೆ, ಕರ್ತನು ಭೂಮಿಯ ಮೇಲೆ ಒಂದು ಕ್ಲುಪ್ತ ವಾದ ಕಾರ್ಯವನ್ನು ಮಾಡುವನು.
29 ಯೆಶಾಯನು ಮುಂದಾಗಿ--ಸೈನ್ಯಗಳ ಕರ್ತನು ನಮಗಾಗಿ ಸಂತಾನ ವನ್ನು ಉಳಿಸದೆ ಹೋಗಿದ್ದರೆ ನಾವು ಸೊದೋಮಿನ ಹಾಗೆ ಇರುತ್ತಿದ್ದೆವು; ಗೊಮೋರದ ಸ್ಥಿತಿಯು ನಮ್ಮದಾ ಗುತ್ತಿತ್ತು ಎಂದು ಹೇಳಿದನು.
30 ಹಾಗಾದರೆ ನಾವು ಏನು ಹೇಳೋಣ? ನೀತಿ ಯನ್ನು ಹೊಂದುವದಕ್ಕೆ ಪ್ರಯತ್ನಮಾಡದ ಅನ್ಯ ಜನರಿಗೆ ನೀತಿಯು ಅಂದರೆ ನಂಬಿಕೆಯಿಂದುಂಟಾಗುವ

ನೀತಿಯು ದೊರಕಿತು.
31 ಆದರೆ ನ್ಯಾಯಪ್ರಮಾಣ ದಿಂದುಂಟಾದ ನೀತಿಯನ್ನು ಅನುಸರಿಸಿದ ಇಸ್ರಾಯೇ ಲ್ಯರು ನ್ಯಾಯಪ್ರಮಾಣದ ನೀತಿಯನ್ನು ಹೊಂದದೆ ಹೋಗಿದ್ದಾರೆ.
32 ಅದಕ್ಕೆ ಕಾರಣವೇನು? ಅವರು ನಂಬಿಕೆಯನ್ನು ಆಧಾರಮಾಡಿಕೊಳ್ಳದೆ ನ್ಯಾಯ ಪ್ರಮಾಣದ ಕ್ರಿಯೆಗಳನ್ನು ಆಧಾರಮಾಡಿಕೊಂಡದ್ದೇ ಕಾರಣ.
33 ಇಗೋ, ನಾನು ಚೀಯೋನಿನಲ್ಲಿ ಎಡವುವ ಕಲ್ಲನ್ನೂ ಮುಗ್ಗರಿಸುವ ಬಂಡೆಯನ್ನೂ ಇಡುತ್ತೇ ನೆಂತಲೂ ಅದರ ಮೇಲೆ ನಂಬಿಕೆಯಿಡುವವನು ಆಶಾ

ಭಂಗಪಡುವದಿಲ್ಲವೆಂತಲೂ ಬರೆದಿರುವ ಪ್ರಕಾರ ಆ ಎಡವುವ ಕಲ್ಲಿಗೆ ಅವರು ಎಡವಿಬಿದ್ದರು ಎಂಬದೇ.

## ಅಧ್ಯಾಯ 10

1 ಸಹೋದರರರೇ, ಇಸ್ರಾಯೇಲ್ಯರು ರಕ್ಷಣೆ ಹೊಂದಬೇಕೆಂಬದೇ ನನ್ನ ಮನೋಭಿ ಲಾಷೆಯೂ ದೇವರಿಗೆ ನಾನು ಮಾಡುವ ಪ್ರಾರ್ಥನೆ ಯೂ ಆಗಿದೆ;
2 ದೇವರಲ್ಲಿ ಆಸಕ್ತರಾಗಿದ್ದಾರೆಂದು ನಾನು ಅವರ ವಿಷಯದಲ್ಲಿ ಸಾಕ್ಷಿಕೊಡುತ್ತೇನೆ; ಆದರೂ ಅವರ ಆಸಕ್ತಿಯು

ಜ್ಞಾನಾನುಸಾರವಾದದ್ದಲ್ಲ.
3 ಅವರು ದೇವ ರಿಂದ ದೊರಕುವ ನೀತಿಯನ್ನರಿಯದೆ ಸ್ವನೀತಿಯನ್ನೇ ಸ್ಥಾಪಿಸಬೇಕೆಂದು ಪ್ರಯತ್ನಿಸುತ್ತಾ ಇದ್ದದರಿಂದ ದೇವರ ನೀತಿಗೆ ಅಧೀನರಾಗಲಿಲ್ಲ.
4 ನಂಬುವ ಪ್ರತಿಯೊಬ್ಬನು ನೀತಿವಂತನಾಗುವಂತೆ ಕ್ರಿಸ್ತನು ನ್ಯಾಯಪ್ರಮಾಣದ ಅಂತ್ಯವಾಗಿದ್ದಾನೆ.
5 ಇದಲ್ಲದೆ-- ನ್ಯಾಯಪ್ರಮಾಣವು ಹೇಳುವವುಗಳನ್ನು ಮಾಡುವವನು ಅವುಗಳಿಂದಲೇ ಜೀವಿಸುವನು ಎಂದು ಮೋಶೆಯು ಅದರ ನೀತಿಯ ವಿಷಯವಾಗಿ ವಿವರಿಸುತ್ತಾನೆ.

6 ಆದರೆ ನಂಬಿಕೆ ಯಿಂದುಂಟಾಗುವ ನೀತಿಯು ಹೇಳುವದೇನಂದರೆ, (ಮೇಲಿನಿಂದ ಕ್ರಿಸ್ತನನ್ನು ತರುವಂತೆ) ಪರಲೋಕಕ್ಕೆ ಏರಿ ಹೋಗುವವನು ಯಾರು?
7 ಇಲ್ಲವೆ (ಸತ್ತವರೊ ಳಗಿಂದ ಕ್ರಿಸ್ತನನ್ನು ಮೇಲಕ್ಕೆ ತರುವದಕ್ಕಾಗಿ) ಅಗಾಧಕ್ಕೆ ಇಳಿದು ಹೋಗುವವನು ಯಾರು ಎಂದು ನಿನ್ನ ಹೃದಯ ದಲ್ಲಿ ಅಂದುಕೊಳ್ಳಬೇಡ.
8 ಆದರೆ ಅದು ಏನು ಹೇಳುತ್ತದೆ? ವಾಕ್ಯವು ನಿನ್ನ ಸವಿಾಪದಲ್ಲಿಯೂ ನಿನ್ನ ಬಾಯಲ್ಲಿಯೂ ನಿನ್ನ ಹೃದಯದಲ್ಲಿಯೂ ಇದೆ ಎಂದು ಅನ್ನುತ್ತದೆ; ಅದೇನಂದರೆ--ನಾವು

ಸಾರುವ ನಂಬಿಕೆಯ ವಿಷಯವಾದ ವಾಕ್ಯವೇ.
9 ನೀನು ಕರ್ತನಾದ ಯೇಸು ವನ್ನು ಬಾಯಿಂದ ಅರಿಕೆಮಾಡಿ ದೇವರು ಆತನನ್ನು ಸತ್ತವರೊಳಗಿಂದ ಎಬ್ಬಿಸಿದ್ದಾನೆಂದು ನಿನ್ನ ಹೃದಯದಲ್ಲಿ ನಂಬಿದರೆ ನಿನಗೆ ರಕ್ಷಣೆಯಾಗುವದು ಎಂಬದೇ.
10 ಹೃದಯದಿಂದ ನಂಬುವದರ ಮೂಲಕ ನೀತಿಯು ದೊರೆಯುತ್ತದೆ. ಬಾಯಿಂದ ಅರಿಕೆಮಾಡುವದರ ಮೂಲಕ ರಕ್ಷಣೆಯಾಗುತ್ತದೆ.
11 ಆತನ ಮೇಲೆ ನಂಬಿಕೆ ಇಡುವ ಯಾವನಾದರೂ ನಾಚಿಕೆಪಡುವದಿಲ್ಲ ಎಂದು

ಬರಹವು ಹೇಳುತ್ತದೆ.
12 ಇದರಲ್ಲಿ ಯೆಹೂದ್ಯರಿಗೂ ಗ್ರೀಕರಿಗೂ ಹೆಚ್ಚು ಕಡಿಮೆ ಏನೂ ಇಲ್ಲ; ಎಲ್ಲರ ಮೇಲೆ ಕರ್ತನಾಗಿರುವ ಆತನೇ ತನ್ನನ್ನು ಬೇಡಿಕೊಳ್ಳು ವವರೆಲ್ಲರಿಗೆ ಐಶ್ವರ್ಯವಂತನಾಗಿದ್ದಾನೆ.
13 ಕರ್ತನ ನಾಮದಲ್ಲಿ ಬೇಡಿಕೊಳ್ಳುವ ಯಾರಿಗಾದರೂ ರಕ್ಷಣೆ ಯಾಗುವದು.
14 ಆದರೆ ತಾವು ಯಾವಾತನನ್ನು ನಂಬಲಿಲ್ಲವೋ ಆತನನ್ನು ಬೇಡಿಕೊಳ್ಳುವದು ಹೇಗೆ? ಆತನ ವಿಷಯ ವಾಗಿ ಕೇಳದಿರುವಲ್ಲಿ ಆತನನ್ನು ನಂಬುವದು ಹೇಗೆ? ಸಾರಿ ಹೇಳುವವನಿಲ್ಲದೆ ಕೇಳುವದು ಹೇಗೆ?
15 ಇದ ಲ್ಲದೆ ಸಾರುವವರನ್ನು ಕಳುಹಿಸದಿದ್ದರೆ

ಅವರು ಸಾರು ವದು ಹೇಗೆ? ಮತ್ತು--
ಸಮಾಧಾನದ ಸುವಾರ್ತೆ ಯನ್ನು
ಸಾರುವವರ ಮತ್ತು ಸಂತೋಷದ ಸುವರ್ತ
ಮಾನವನ್ನು ತರುವವರ ಪಾದಗಳು ಎಷ್ಟೋ
ಅಂದ ವಾಗಿವೆ ಎಂದು ಬರೆದದೆ.
16 ಆದರೆ ಅವರೆಲ್ಲರೂ ಸುವಾರ್ತೆಗೆ
ವಿಧೇಯರಾಗಲಿಲ್ಲ. ಆದದರಿಂದ
ಯೆಶಾಯನು--ಕರ್ತನೇ, ನಮ್ಮ
ವಾರ್ತೆಯನ್ನು ಯಾರು ನಂಬಿದರು
ಅನ್ನುತ್ತಾನೆ.
17 ಕೇಳುವದರಿಂದ
ನಂಬಿಕೆಯುಂಟಾಗುತ್ತದೆ. ದೇವರ
ವಾಕ್ಯವನ್ನು ಕೇಳುವದ ರಿಂದಲೇ.

18 ಆದರೆ--ಅವರು ಕೇಳಲಿಲ್ಲವೇನು ಎಂದು
ನಾನು ಕೇಳುತ್ತೇನೆ. ಹೌದು ನಿಜವೇ, ಅವರ
ಧ್ವನಿಯು ಭೂಮಿಯಲ್ಲೆಲ್ಲಾ ಪ್ರಸರಿಸಿತು,
ಅವರ ನುಡಿಗಳು ಲೋಕದ ಕಟ್ಟಕಡೆಯ
ವರೆಗೂ ವ್ಯಾಪಿಸಿದವು.
19 ಆದರೆ--ಇಸ್ರಾಯೇಲ್ಯರು
ತಿಳುಕೊಳ್ಳಲಿಲ್ಲವೇನು ಎಂದು ನಾನು
ಕೇಳುತ್ತೇನೆ. ಈ ವಿಷಯದಲ್ಲಿ--ನನ್ನ
ಜನಾಂಗವಲ್ಲದವರ ಮೂಲಕ ನಿಮ್ಮಲ್ಲಿ
ಹುರುಡು ಹುಟ್ಟಿಸುವೆನು; ವಿವೇಕವಿಲ್ಲದ
ಜನರ ಮೂಲಕ ನಿಮ್ಮನ್ನು ಸಿಟ್ಟಿಗೆಬ್ಬಿಸುವೆನು
ಎಂದು ಮೊದಲು ಮೋಶೆಯು ಹೇಳುತ್ತಾನೆ.
20 ಇದಲ್ಲದೆ ಯೆಶಾಯನು ಧೈರ್ಯವಾಗಿ

ಮಾತನಾಡಿ--ನನ್ನನ್ನು ಹುಡುಕದವರಿಗೆ ಸಿಕ್ಕಿದೆನು, ನನ್ನ ವಿಷಯವಾಗಿ ವಿಚಾರ ಮಾಡದವರಿಗೂ ಪ್ರತ್ಯಕ್ಷನಾದೆನು ಎಂದು ಹೇಳುತ್ತಾನೆ.

21 ಆದರೆ ಅವನು ಇಸ್ರಾಯೇಲ್ಯರ ವಿಷಯವಾಗಿ--ನನಗೆ ಅವಿಧೇಯ ರಾಗಿ ಎದುರು ಮಾತನಾಡುವ ಜನರ ಕಡೆಗೆ ನಾನು ದಿನವೆಲ್ಲಾ ಕೈ ಚಾಚಿದೆನು ಎಂದು ಹೇಳುತ್ತಾನೆ.

## ಅಧ್ಯಾಯ 11

1 ಹಾಗಾದರೆ--ದೇವರು ತನ್ನ ಪ್ರಜೆಯನ್ನು

ತಳ್ಳಿಬಿಟ್ಟದ್ದುಂಟೇ ಎಂದು ನಾನು ಕೇಳುತ್ತೇನೆ. ಹಾಗೆ ಎಂದಿಗೂ ಹೇಳಬಾರದು. ಯಾಕಂದರೆ ನಾನು ಸಹ ಇಸ್ರಾಯೇಲ್ಯನು. ಅಬ್ರ ಹಾಮನ ಸಂತತಿಯವನು, ಬೆನ್ಯಾವಿೂನನ ಗೋತ್ರ ದವನು ಆಗಿದ್ದೇನಲ್ಲಾ.
2 ದೇವರು ಮುಂದಾಗಿ ಅರಿತುಕೊಂಡಿದ್ದ ತನ್ನ ಜನರನ್ನು ತಳ್ಳಿಹಾಕಲಿಲ್ಲ. ಎಲೀಯನ ವಿಷಯವಾಗಿಯಾದರೋ ಅವನು ಇಸ್ರಾಯೇಲ್ಯರಿಗೆ ವಿರೋಧವಾಗಿ ದೇವರಿಗೆ ವಿಜ್ಞಾಪನೆ ಮಾಡುತ್ತಾ--
3 ಕರ್ತನೇ, ಅವರು ನಿನ್ನ ಪ್ರವಾದಿಗಳನ್ನು ಕೊಂದು ನಿನ್ನ ಯಜ್ಞವೇದಿಗಳನ್ನು ಕೆಡವಿಹಾಕಿದ್ದಾರೆ; ಆದರೆ ನಾನೊಬ್ಬನೇ

ಉಳಿದಿದ್ದೇನೆ; ಅವರು ನನ್ನ ಪ್ರಾಣವನ್ನು ತೆಗೆಯಲು ಹುಡುಕುತ್ತಿದ್ದಾರೆ ಎಂದು ಬರಹವು ಹೇಳಿದ್ದು ನಿಮಗೆ ಗೊತ್ತಿಲ್ಲವೋ?
4 ಆದರೆ ದೇವರು ಅವನಿಗೆ ಕೊಟ್ಟ ಉತ್ತರವೇನಂದರೆ--ಬಾಳನ ವಿಗ್ರಹಕ್ಕೆ ಮೊಣಕಾಲೂರದ ಏಳುಸಾವಿರ ಜನರನ್ನು ನಾನು ನನಗೋಸ್ಕರ ಉಳಿಸಿಕೊಂಡಿದ್ದೇನೆ ಎಂಬದು.
5 ಅದರಂತೆ ಈಗಿನ ಕಾಲದಲ್ಲಿ ಕೃಪೆಯು ಆಯ್ಕೆಯ ಪ್ರಕಾರ ಒಂದಂಶವು ಉಳಿದಿದೆ.
6 ಕೃಪೆಯಿಂದಾಗಿದ್ದರೆ ಇನ್ನೆಂದಿಗೂ ಕ್ರಿಯೆಗಳಿಂದಲ್ಲ; ಇಲ್ಲವಾದರೆ ಕೃಪೆಯು ಇನ್ನೆಂದಿಗೂ ಕೃಪೆಯೇ ಅಲ್ಲ.

ಕ್ರಿಯೆಗಳಿಂದಾಗಿದ್ದರೆ ಇನ್ನೆಂದಿಗೂ ಕೃಪೆಯಲ್ಲ; ಇಲ್ಲವಾದರೆ ಕ್ರಿಯೆಯು ಇನ್ನೆಂದಿಗೂ ಕ್ರಿಯೆಯಲ್ಲ.
7 ಹಾಗಾದರೇನು? ಇಸ್ರಾ ಯೇಲ್ಯರು ತಾವು ಹುಡುಕಿದ್ದನ್ನು ಹೊಂದಿಕೊಳ್ಳಲಿಲ್ಲ; ಆದರೆ ಆಯ್ಕೆಯಾದವರು ಅದನ್ನು ಹೊಂದಿಕೊಂಡರು.
8 (ಬರೆದಿರುವಂತೆ ದೇವರು ಅವರಿಗೆ ತೂಕಡಿಕೆಯ ಆತ್ಮವನ್ನೂ ಕಾಣದ ಕಣ್ಣುಗಳನ್ನೂ ಕೇಳದ ಕಿವಿಗಳನ್ನೂ ಕೊಟ್ಟಿದ್ದಾನೆ). ಉಳಿದವರು ಈ ದಿನದ ವರೆಗೂ ಕುರುಡರಾಗಿದ್ದಾರೆ.
9 ಇದಲ್ಲದೆ ದಾವೀದನು--ಅವರ ಊಟವು

ಅವರಿಗೆ ಉರ್ಲು ಬೋನೂ ಅಭ್ಯಂತರವೂ ಪ್ರತಿಫಲವೂ ಆಗಲಿ.
10 ನೋಡದಂತೆ ಅವರ ಕಣ್ಣು ಗಳು ಮೊಬ್ಬಾಗಲಿ; ಅವರ ಬೆನ್ನು ಯಾವಾಗಲೂ ಬೊಗ್ಗಿಕೊಂಡಿರಲಿ ಎಂದು ಅನ್ನುತ್ತಾನೆ.
11 ಹಾಗಾದರೆ--ಅವರು ಬಿದ್ದುಹೋಗುವಂತೆ ಎಡವಿದರೆಂದು ನಾನು ಹೇಳಬೇಕೋ? ಹಾಗೆ ಎಂದಿಗೂ ಆಗಬಾರದು; ಆದರೆ ಅವರಲ್ಲಿ ಹುರುಡು ಹುಟ್ಟಿಸುವದಕ್ಕಾಗಿ ಅವರ ಬೀಳುವಿಕೆಯ ಮೂಲಕವೇ ಅನ್ಯಜನರಿಗೆ ರಕ್ಷಣೆಯುಂಟಾಯಿತು.
12 ಅವರ ಬೀಳುವಿಕೆಯು ಲೋಕದ ಐಶ್ವರ್ಯಕ್ಕೂ ಅವರ ಕುಂದುವಿಕೆಯು

ಅನ್ಯಜನಗಳ ಸಂಪತ್ತಿಗೂ ಆಗಿರು ವದಾದರೆ
ಅವರ ಸಮೃದ್ಧಿಯು ಇನ್ನೂ ಎಷ್ಟೋ
ಹೆಚ್ಚಾಗಿರುವದಲ್ಲವೇ?
13 ಅನ್ಯಜನರಾದ ನಿಮ್ಮೊಂದಿಗೆ ನಾನು
ಮಾತನಾಡು ತ್ತೇನೆ. ನಾನು ಅನ್ಯಜನಗಳಿಗೆ
ಅಪೊಸ್ತಲನಾಗಿ ರುವದರಿಂದ ನನ್ನ
ಉದ್ಯೋಗವನ್ನು ಗಣನೆಗೆ ತರುತ್ತೇನೆ.
14 ಹೀಗೆ ಯಾವ ವಿಧದಲ್ಲಿಯಾದರೂ ನನ್ನ
ಸ್ವಜನರಲ್ಲಿ ಹುರುಡನ್ನು ಹುಟ್ಟಿಸಿ ಅವರಲ್ಲಿ
ಕೆಲವರು ರಕ್ಷಣೆ ಹೊಂದುವಂತೆ ಮಾಡೇನು.
15 ಅವರನ್ನು ತಳ್ಳುವದರಿಂದ ಲೋಕವು
ಸಮಾಧಾನವಾಗು ವದಾದರೆ ಅವರನ್ನು
ಸೇರಿಸಿಕೊಳ್ಳುವದರಿಂದ ಏನಾಗುವದು?

ಸತ್ತವರು ಜೀವಿತರಾಗಿ ಎದ್ದು ಬಂದಂತಾಗುವದಿಲ್ಲವೇ.
16 ಪ್ರಥಮ ಫಲವು ಪವಿತ್ರವಾಗಿದ್ದರೆ ಕಣಕವೂ ಪವಿತ್ರವಾಗಿದೆ ಮತ್ತು ಬೇರು ಪವಿತ್ರವಾಗಿದ್ದರೆ ಕೊಂಬೆಗಳೂ ಪವಿತ್ರವಾಗಿವೆ.
17 ಆದರೆ ಕೆಲವು ಕೊಂಬೆಗಳು ಮುರಿದು ಹಾಕಲ್ಪಟ್ಟ ದ್ದರಿಂದ ಕಾಡೆಣ್ಣೇ ಮರದಂತಿರುವ ನೀನು ಅವುಗಳ ತಾವಿನಲ್ಲಿ ಕಸಿಕಟ್ಟಿಸಿಕೊಂಡವನಾಗಿ ಊರೆಣ್ಣೇ ಮರದ ರಸವತ್ತಾದ ಬೇರಿನಲ್ಲಿ ಪಾಲು ಹೊಂದಿದವನಾಗಿದ್ದೀ.
18 ಆದರೂ ಆ ಕೊಂಬೆಗಳಿಗೆ ಮೇಲಾಗಿ ನಿನ್ನನ್ನು ಹೆಚ್ಚಿಸಿಕೊಳ್ಳಬೇಡ; ಹೆಚ್ಚಿಸಿಕೊಂಡರೂ

ಆ ಬೇರಿಗೆ ನೀನು ಆಧಾರವಲ್ಲ, ಅದು ನಿನಗೆ
ಆಧಾರವಾಗಿದೆಯಷ್ಟೆ.
19 ಈ ಮಾತಿಗೆ--ನಾನು ಕಸಿಕಟ್ಟಿಸಿ
ಕೊಳ್ಳುವಂತೆ ಕೊಂಬೆಗಳು ಮುರಿದು
ಹಾಕಲ್ಪಟ್ಟವಲ್ಲಾ ಎಂದು ನೀನು ಹೇಳುವಿ.
20 ಒಳ್ಳೆಯದು, ಅವರು ನಂಬದೆ
ಹೋದದರಿಂದ ಮುರಿದುಹಾಕಲ್ಪಟ್ಟರು,
ನೀನು ನಿಂತಿರುವದು ನಂಬಿಕೆಯಿಂದಲೇ,
ಗರ್ವ ಪಡಬೇಡ, ಭಯದಿಂದಿರು;
21 ದೇವರು ಹುಟ್ಟು ಕೊಂಬೆಗಳನ್ನು
ಉಳಿಸದೆಯಿದ್ದ ಮೇಲೆ ನಿನ್ನನ್ನೂ ಉಳಿಸು
ವದಿಲ್ಲ.
22 ಆದದರಿಂದ ದೇವರ ದಯೆಯನ್ನೂ

ಕಾಠಿಣ್ಯ ವನ್ನೂ ನೋಡು; ಬಿದ್ದವರ ಕಡೆಗೆ ಕಾಠಿಣ್ಯ; ನೀನು ದೇವರ ದಯೆಯನ್ನು ಆಶ್ರಯಿಸಿಕೊಂಡೇ ಇದ್ದರೆ ನಿನ್ನ ಕಡೆಗೆ ಆತನ ದಯೆ; ಇಲ್ಲವಾದರೆ ನೀನೂ ಕಡಿದು ಹಾಕಲ್ಪಡುವಿ.
23 ಅವರು ಕೂಡ ಇನ್ನು ಅಪ ನಂಬಿಕೆಯಲ್ಲಿ ನಿಲ್ಲದ ಪಕ್ಷಕ್ಕೆ ಕಸಿಕಟ್ಟಲ್ಪಡುವರು; ಯಾಕಂದರೆ ದೇವರು ಅವರನ್ನು ತಿರಿಗಿ ದೇವರು ಕಸಿಕಟ್ಟುವದಕ್ಕೆ ಸಮರ್ಥನಾಗಿದ್ದಾನೆ.
24 ಹುಟ್ಟು ಕಾಡು ಮರದಿಂದ ಕಡಿದು ತೆಗೆಯಲ್ಪಟ್ಟಿರುವ ನೀನು ನಿನಗೆ ಸಂಬಂಧಪಡದ ಊರುಮರದಲ್ಲಿ ಕಸಿಕಟ್ಟಿಸಿಕೊಂಡವ ನಾದ ಮೇಲೆ ಅದರಲ್ಲಿ

ಹುಟ್ಟಿದ ಕೊಂಬೆಗಳಾಗಿರುವ ಅವರು ಸ್ವಂತ ಮರದಲ್ಲಿ ಕಸಿಕಟ್ಟಲ್ಪಡುವದು ಎಷ್ಟೋ ಸಹಜವಾಗಿದೆಯಲ್ಲವೇ.
25 ಸಹೋದರರರೇ, ನಿಮ್ಮನ್ನು ನೀವೇ ಬುದ್ಧಿವಂತ ರೆಂಬದಾಗಿ ಎಣಿಸಿಕೊಳ್ಳದಂತೆ ಗುಪ್ತವಾಗಿದ್ದ ಒಂದು ಸಂಗತಿ ನಿಮಗೆ ತಿಳಿದಿರಬೇಕೆಂದು ಅಪೇಕ್ಷಿಸುತ್ತೇನೆ. ಅದೇನಂದರೆ, ಇಸ್ರಾಯೇಲ್ಯರಲ್ಲಿ ಒಂದು ಪಾಲು ಜನರಿಗೆ ಉಂಟಾದ ಕುರುಡುತನವು ಅನ್ಯಜನಗಳು ಸಂಪೂರ್ಣವಾಗಿ ದೇವರ ರಾಜ್ಯದಲ್ಲಿ ಸೇರುವ ತನಕ
26 ಹೀಗೆ ಇಸ್ರಾಯೇಲ್ ಜನರೆಲ್ಲಾ ರಕ್ಷಣೆಹೊಂದುವರು. ಇದಕ್ಕೆ ಆಧಾರವಾಗಿ--

ಬಿಡಿಸು ವಾತನು ಚೀಯೋನಿನೊಳಗಿಂದ
ಹೊರಟುಬಂದು ಯಾಕೋಬಿನಲ್ಲಿರುವ
ಭಕ್ತಿಹೀನತೆಯನ್ನು ನಿವಾರಣೆ ಮಾಡುವನು.
27 ನಾನು ಅವರ ಪಾಪಗಳನ್ನು ತೆಗೆದು
ಹಾಕುವದು ಅವರ ಸಂಗಡ ಮಾಡಿಕೊಂಡ
ನನ್ನ ಒಡಂಬಡಿಕೆಯಾಗಿದೆ ಎಂಬದು.
28 ಸುವಾರ್ತೆಯ ವಿಷಯದಲ್ಲಿ ಅವರು
ನಿಮ್ಮ ನಿಮಿತ್ತವಾಗಿ ವೈರಿಗಳಾ ಗಿದ್ದಾರೆ; ಆದರೆ
ಆಯ್ಕೆಯ ವಿಷಯದಲ್ಲಿ ಅವರು ಪಿತೃಗಳ
ನಿಮಿತ್ತವಾಗಿ ಪ್ರಿಯರಾಗಿದ್ದಾರೆ.
29 ದೇವರ ದಾನಗಳೂ ಕರೆಯುವಿಕೆಯೂ
ಪಶ್ಚಾತ್ತಾಪವಿಲ್ಲದವು ಗಳಾಗಿವೆ.
30 ಕಳೆದುಹೋದ ಕಾಲಗಳಲ್ಲಿ ನೀವು

ದೇವರನ್ನು ನಂಬದೆ ಇದ್ದೀರಿ; ಆದಾಗ್ಯೂ ಅವರ ಅಪನಂಬಿಕೆಯ ಮೂಲಕ ನೀವು ಈಗ ಹೇಗೆ ಕರುಣೆ ಯನ್ನು ಹೊಂದಿದ್ದೀರೋ
31 ಹಾಗೆಯೇ ನೀವು ಹೊಂದಿದ ಕರುಣೆಯ ಮೂಲಕ ಇವರೂ (ಮುಂದೆ) ಕರುಣೆಯನ್ನು ಹೊಂದುವಂತೆ ಈಗ ನಂಬದವ ರಾಗಿದ್ದಾರೆ.
32 ಆದರೆ ದೇವರು ಮನುಷ್ಯರೆಲ್ಲರ ಮೇಲೆ ಕರುಣೆ ತೋರಿಸಬೇಕೆಂದು ಅವರೆಲ್ಲರನ್ನೂ ಅಪನಂಬಿಕೆ ಯಲ್ಲಿ ಮುಚ್ಚಿಹಾಕಿದ್ದಾನೆ.
33 ಹಾ, ದೇವರ ಜ್ಞಾನದ ಮತ್ತು ತಿಳುವಳಿಕೆಯ ಐಶ್ವರ್ಯವು ಎಷ್ಟೋ ಅಗಾಧ ವಾಗಿದೆ! ಆತನ ತೀರ್ಪುಗಳು

ಪರಿಶೋಧನೆಗೂ ಆತನ ಮಾರ್ಗಗಳು ಕಂಡು ಹಿಡಿಯುವದಕ್ಕೂ ಅಸಾಧ್ಯ ವಾಗಿವೆ!
34 ಕರ್ತನ ಮನಸ್ಸನ್ನು ತಿಳಿದುಕೊಂಡವನು ಯಾರು? ಇಲ್ಲವೆ ಆತನಿಗೆ ಆಲೋಚನೆ ಹೇಳಿದವನು ಯಾರು?
35 ಇಲ್ಲವೆ ಮೊದಲು ಆತನಿಗೆ ಕೊಟ್ಟು ಪ್ರತಿಫಲವನ್ನು ತೆಗೆದುಕೊಳ್ಳುವವನು ಯಾರು?
36 ಸಮಸ್ತವು ಆತನಿಂದಲೂ ಆತನ ಮುಖಾಂತರವೂ ಆತನಿಗಾಗಿಯೂ ಇರುತ್ತದೆ; ಆತನಿಗೆ ಸದಾಕಾಲವೂ ಮಹಿಮೆಯಾಗಲಿ. ಆಮೆನ್.

# ಅಧ್ಯಾಯ 12

1 ಆದದರಿಂದ ಸಹೋದರರರೇ, ನೀವು ನಿಮ್ಮ
ದೇಹಗಳನ್ನು ಪರಿಶುದ್ಧವೂ ದೇವರಿಗೆ
ಮೆಚ್ಚಿಕೆಯೂ ಆಗಿರುವ ಸಜೀವಯಜ್ಞವಾಗಿ
ಸಮರ್ಪಿಸ ಬೇಕೆಂದು ದೇವರ ಕರುಣೆಯಿಂದ
ನಾನು ನಿಮ್ಮನ್ನು ಬೇಡಿಕೊಳ್ಳುತ್ತೇನೆ; ಇದೇ
ನಿಮ್ಮ ಯೋಗ್ಯವಾದ ಸೇವೆ ಯಾಗಿದೆ.
2 ಇಹಲೋಕವನ್ನು ಅನುಸರಿಸದೆ ಉತ್ತಮ
ವಾದದ್ದೂ ಮೆಚ್ಚಿಕೆಯಾದದ್ದೂ ಪರಿಪೂರ್ಣ
ವಾದದ್ದೂ ಆಗಿರುವ ದೇವರ ಚಿತ್ತವೇನೆಂದು
ನೀವು ವಿವೇಚಿಸಿ ತಿಳಿದುಕೊಳ್ಳುವಂತೆ ನೂತನ
ಮನಸ್ಸನ್ನು ಹೊಂದಿಕೊಂಡು

ರೂಪಾಂತರಗೊಂಡವರಾಗಿರಿ.
3 ನಿಮ್ಮೊಳಗೆ ಪ್ರತಿಯೊಬ್ಬನು ತನ್ನ ಯೋಗ್ಯತೆಗೆ ಮೀರಿ ಭಾವಿಸಿಕೊಳ್ಳದೆ ದೇವರು ಪ್ರತಿಯೊಬ್ಬನಿಗೆ ಅವನವನ ವಿಶ್ವಾಸದ ಪ್ರಮಾಣಕ್ಕನುಸಾರವಾಗಿ ಕೊಟ್ಟಂತೆ ತನ್ನನ್ನು ಮಿತವಾಗಿ ತಿಳಿದುಕೊಳ್ಳಬೇಕೆಂದು ನನಗೆ ಕೊಡಲ್ಪಟ್ಟ ಕೃಪೆಗನುಸಾರವಾಗಿ ನಾನು ಹೇಳುತ್ತೇನೆ.
4 ನಮಗೆ ಒಂದೇ ದೇಹದಲ್ಲಿ ಬಹಳ ಅಂಗಗಳಿರಲಾಗಿ ಆ ಎಲ್ಲಾ ಅಂಗಗಳಿಗೆ ಹೇಗೆ ಒಂದೇ ಕೆಲಸವಿರುವದಿಲ್ಲವೋ
5 ಹಾಗೆಯೇ ಅನೇಕರಾದ ನಾವು ಕ್ರಿಸ್ತನಲ್ಲಿ ಒಂದೇ ದೇಹವಾಗಿದ್ದು ಒಬ್ಬರಿ ಗೊಬ್ಬರು

ಪರಸ್ಪರ ಅಂಗಗಳಾಗಿದ್ದೇವೆ.
6 ಹೀಗೆ ಕೃಪೆಗನುಸಾರವಾಗಿ ನಮಗೆ ವಿಧವಿಧವಾದ ವರಗಳು ಕೊಡಲ್ಪಟ್ಟಿರಲು ಅವುಗಳಲ್ಲಿ ಅದು ಪ್ರವಾದನೆ ಯಾಗಿದ್ದರೆ ನಂಬಿಕೆಯ ಪ್ರಮಾಣಕ್ಕೆ ತಕ್ಕಂತೆ ಪ್ರವಾದಿಸೋಣ.
7 ಇಲ್ಲವೆ ಸೇವೆಯಾಗಿದ್ದರೆ ನಮ್ಮ ಸೇವೆಯಲ್ಲಿ ನಿರತರಾಗಿರೋಣ. ಬೋಧಿಸುವವನು ಬೋಧಿಸುವದರಲ್ಲಿ ನಿರತನಾಗಿರಲಿ.
8 ಇಲ್ಲವೆ ಎಚ್ಚರಿಸುವವನು ಎಚ್ಚರಿಸುವದರಲ್ಲಿ ನಿರತನಾಗಿರಲಿ ಮತ್ತು ಕೊಡುವವನು ಯಥಾರ್ಥವಾಗಿ ಕೊಡಲಿ. ಆಳುವವನು ಶ್ರದ್ಧೆಯಿಂದ ಆಳಲಿ, ಕರುಣೆಯನ್ನು

ತೋರಿಸುವವನು ಸಂತೋಷಪೂರ್ವಕವಾಗಿ ತೋರಿಸಲಿ.
9 ಪ್ರೀತಿಯು ನಿಷ್ಕಪಟವಾಗಿರಲಿ ಕೆಟ್ಟತನವನ್ನು ಹೇಸಿ ಕೊಂಡು ಒಳ್ಳೆಯದಕ್ಕೆ ಅಂಟಿಕೊಳ್ಳಿರಿ.
10 ಸಹೋದರ ಪ್ರೀತಿಯಿಂದ ಒಬ್ಬರಿಗೊಬ್ಬರು ಕರುಣಾ ವಾತ್ಸಲ್ಯವುಳ್ಳ ವರಾಗಿರ್ರಿ; ಸನ್ಮಾನಿಸುವದರಲ್ಲಿ ಒಬ್ಬರಿಗಿಂತ ಒಬ್ಬರು ಮುಂದಾಗಿರ್ರಿ.
11 ಸೇವೆಯಲ್ಲಿ ಅಲಸ್ಯವಾಗಿರಬೇಡಿರಿ, ಆತ್ಮದಲ್ಲಿ ಆಸಕ್ತರಾಗಿದ್ದು ಕರ್ತನನ್ನು ಸೇವಿಸುವವ ರಾಗಿರ್ರಿ.
12 ನಿರೀಕ್ಷೆಯಲ್ಲಿ ಸಂತೋಷಿಸುತ್ತಾ

ಸಂಕಟದಲ್ಲಿ ತಾಳ್ಮೆಯುಳ್ಳವರಾಗಿದ್ದು
ಆಸಕ್ತಿಯುಳ್ಳವರಾಗಿ ಪ್ರಾರ್ಥನೆ ಯಲ್ಲಿ
ನಿರತರಾಗಿರ್ರಿ.
13 ಪರಿಶುದ್ಧರ ಕೊರತೆಯ ಪ್ರಕಾರ ಹಂಚಿರಿ;
ಅತಿಥಿಸತ್ಕಾರವನ್ನು ಮಾಡಿರಿ.
14 ನಿಮ್ಮನ್ನು ಹಿಂಸಿಸುವವರನ್ನು
ಆಶೀರ್ವದಿಸಿರಿ; ಶಪಿಸದೆ ಆಶೀ ರ್ವದಿಸಿರಿ.
15 ಸಂತೋಷಪಡುವವರ ಸಂಗಡ
ಸಂತೋಷಪಡಿರಿ; ಅಳುವವರ ಸಂಗಡ ಅಳಿರಿ.
16 ಒಬ್ಬರಿಗೊಬ್ಬರು ಒಂದೇ
ಮನಸ್ಸುಳ್ಳುವರಾಗಿರ್ರಿ; ದೊಡ್ಡಸ್ತಿಕೆಗಳ ಮೇಲೆ
ಮನಸ್ಸಿಡದೆ ದೀನರ ಸಂಗಡ
ಬಳಿಕೆಯಾಗಿರ್ರಿ. ನಿಮ್ಮನ್ನು ನೀವೇ

ಬುದ್ಧಿವಂತರೆಂದು ಭಾವಿಸಿಕೊಳ್ಳಬೇಡಿರಿ.
17 ಯಾರಿಗೂ ಕೆಟ್ಟದ್ದಕ್ಕೆ ಪ್ರತಿಯಾಗಿ
ಕೆಟ್ಟದ್ದನ್ನು ಮಾಡಬೇಡಿರಿ. ಎಲ್ಲರ ದೃಷ್ಟಿಯಲ್ಲಿ
ಯಾವದು ಗೌರವ ವಾದದ್ದೋ ಅದನ್ನೇ
ಮಾಡುವವರಾಗಿರ್ರಿ.
18 ಸಾಧ್ಯ ವಾದರೆ ನಿಮ್ಮಿಂದಾಗುವ ಮಟ್ಟಿಗೆ
ಎಲ್ಲರ ಸಂಗಡ ಸಮಾಧಾನವಾಗಿರ್ರಿ.
19 ಅತಿ ಪ್ರಿಯರೇ, ನೀವೇ ಮುಯ್ಯಿಗೆ
ಮುಯ್ಯಿ ತೀರಿಸದೆ ಶಿಕ್ಷಿಸುವದನ್ನು ದೇವರಿಗೆ
ಬಿಡಿರಿ. ಯಾಕಂದರೆ--ಮುಯ್ಯಿಗೆ ಮುಯ್ಯಿ
ತೀರಿಸು ವದು ನನ್ನ ಕೆಲಸ, ನಾನೇ
ಪ್ರತಿಫಲವನ್ನು ಕೊಡುವೆನು ಎಂದು ಕರ್ತನು
ಹೇಳುತ್ತಾನೆ ಎಂಬದಾಗಿ ಬರೆದದೆ.

20 ಹಾಗಾದರೆ ನಿನ್ನ ವೈರಿಯು ಹಸಿದಿದ್ದರೆ
ಅವನಿಗೆ ಊಟಕ್ಕೆ ಬಡಿಸು; ಬಾಯಾರಿದ್ದರೆ
ಕುಡಿಯುವದಕ್ಕೆ ಕೊಡು. ಹೀಗೆ
ಮಾಡುವದರಿಂದ ಅವನ ತಲೆಯ ಮೇಲೆ
ಕೆಂಡಗಳನ್ನು ಕೂಡಿಸಿಟ್ಟಂತಾಗುವದು.
21 ಕೆಟ್ಟತನಕ್ಕೆ ಸೋತುಹೋಗದೆ
ಒಳ್ಳೇತನದಿಂದ ಕೆಟ್ಟತನವನ್ನು ಸೋಲಿಸು.

## ಅಧ್ಯಾಯ 13

1 ಪ್ರತಿಯೊಬ್ಬನು ತನ್ನ ಮೇಲಿರುವ
ಅಧಿಕಾರಿಗಳಿಗೆ ಅಧೀನನಾಗಿರಲಿ;
ಯಾಕಂದರೆ ದೇವರಿಂದ ಹೊರತು

ಒಬ್ಬರಿಗೂ ಅಧಿಕಾರವಿರುವದಿಲ್ಲ; ಇರುವ ಅಧಿಕಾರಿಗಳು ದೇವ ರಿಂದ ನೇಮಿಸಲ್ಪಟ್ಟವರು.
2 ಆದದರಿಂದ ಅಧಿಕಾರಕ್ಕೆ ಎದುರುಬೀಳುವವನು ದೇವರ ನೇಮಕವನ್ನು ಎದುರಿಸುತ್ತಾನೆ; ಎದುರಿಸುವವರು ಶಿಕ್ಷೆಗೊಳಗಾಗು ವರು.
3 ಕೆಟ್ಟಕೆಲಸ ಮಾಡುವವನಿಗೆ ಅಧಿಕಾರಿಗಳ ಭಯವಿರುವದೇ ಹೊರತು ಒಳ್ಳೇಕೆಲಸ ಮಾಡುವವ ನಿಗೆ ಇರುವದಿಲ್ಲ; ನೀನು ಅಧಿಕಾರಿಗೆ ಭಯಪಡದೆ ಇರಬೇಕೆಂದು ಅಪೇಕ್ಷಿಸುತ್ತೀಯೋ? ಒಳ್ಳೆಯದನ್ನು ಮಾಡು; ಆಗ ಆ ಅಧಿಕಾರಿಯಿಂದಲೇ ನಿನಗೆ ಹೊಗ

ಳಿಕೆಯುಂಟಾಗುವದು.
4 ಅವನು ನಿನ್ನ ಹಿತಕ್ಕೋಸ್ಕರ ದೇವರ
ಸೇವಕನಾಗಿದ್ದಾನಲ್ಲಾ; ಆದರೆ ನೀನು
ಕೆಟ್ಟದ್ದನ್ನು ಮಾಡಿದರೆ ಭಯಪಡಬೇಕು;
ಅವನು ಸುಮ್ಮನೆ ಕೈಯಲ್ಲಿ ಕತ್ತಿಯನ್ನು
ಹಿಡಿದಿಲ್ಲ; ಅವನು ದೇವರ ಸೇವಕನಾಗಿದ್ದು
ಕೆಟ್ಟದ್ದನ್ನು ನಡಿಸುವವನಿಗೆ ದಂಡನೆಯನ್ನು
ವಿಧಿಸುತ್ತಾನೆ.
5 ಆದಕಾರಣ ದಂಡನೆಯಾದೀತೆಂದು
ಮಾತ್ರವಲ್ಲದೆ ಮನಸ್ಸಿನ ನಿಮಿತ್ತವಾಗಿಯೂ
(ಅವನಿಗೆ) ಅಧೀನ ನಾಗುವದು ಅವಶ್ಯ.
6 ಈ ಕಾರಣದಿಂದಲೇ ನೀವು
ಕಂದಾಯವನ್ನು ಕೂಡ ಕೊಡುತ್ತೀರಿ.

ಯಾಕಂದರೆ ಅವರು ದೇವರ ಉದ್ಯೋಗಿಗಳಾಗಿದ್ದು ಆ ಕೆಲಸ ದಲ್ಲಿಯೇ ನಿರತರಾಗಿರುತ್ತಾರೆ.
7 ಅವರವರಿಗೆ ಸಲ್ಲ ತಕ್ಕದ್ದನ್ನು ಸಲ್ಲಿಸಿರಿ; ಯಾರಿಗೆ ಕಂದಾಯವೋ ಅವರಿಗೆ ಕಂದಾಯವನ್ನು, ಯಾರಿಗೆ ಸುಂಕವೋ ಅವರಿಗೆ ಸುಂಕ ವನ್ನು, ಯಾರಿಗೆ ಭಯವೋ ಅವರಿಗೆ ಭಯವನ್ನು, ಯಾರಿಗೆ ಮರ್ಯಾದೆಯೋ ಅವರಿಗೆ ಮರ್ಯಾದೆ ಯನ್ನು ಸಲ್ಲಿಸಿರಿ.
8 ಒಬ್ಬರನ್ನೊಬ್ಬರು ಪ್ರೀತಿಸಬೇಕೆಂಬ ಋಣವೇ ಹೊರತು ಬೇರೆ ಯಾವ ಸಾಲವೂ ನಿಮಗೆ ಇರ ಬಾರದು. ಮತ್ತೊಬ್ಬರನ್ನು

ಪ್ರೀತಿಸುವವನು ನ್ಯಾಯಪ್ರಮಾಣವನ್ನೆಲ್ಲಾ ನೆರವೇರಿಸಿದ್ದಾನೆ.
9 ಹೇಗಂದರೆ ವ್ಯಭಿಚಾರ ಮಾಡಬಾರದು, ನರಹತ್ಯ ಮಾಡಬಾರದು, ಕದಿಯಬಾರದು, ಸುಳ್ಳುಸಾಕ್ಷಿ ಹೇಳ ಬಾರದು, ಆಶಿಸಬಾರದು ಈ ಮೊದಲಾದ ಎಲ್ಲಾ ಕಟ್ಟಳೆಗಳು--ನಿನ್ನ ನೆರೆಯವನನ್ನು ನಿನ್ನಂತೆಯೇ ಪ್ರೀತಿಸಬೇಕು ಎಂಬ ಒಂದೇ ಮಾತಿನಲ್ಲಿ ಅಡಕವಾಗಿವೆ.
10 ಪ್ರೀತಿಯು ತನ್ನ ನೆರೆಯವನಿಗೆ ಯಾವ ಕೇಡನ್ನೂ ಮಾಡುವದಿಲ್ಲ. ಆದಕಾರಣ ಪ್ರೀತಿ ಯಿಂದಲೇ ನ್ಯಾಯಪ್ರಮಾಣವು ನೆರವೇರುತ್ತದೆ.
11 ಈಗ ನಿದ್ರೆಯಿಂದ ಎಚ್ಚರವಾಗತಕ್ಕ

ಕಾಲವೆಂದು ಅರಿತುಕೊಳ್ಳಿರಿ; ನಾವು ಮೊದಲು ನಂಬಿದ ಕಾಲದಲ್ಲಿ ಇದ್ದದ್ದಕ್ಕಿಂತ ಈಗ ನಮ್ಮ ರಕ್ಷಣೆಯು ಹತ್ತಿರವಾಯಿತು.
12 ಇರುಳು ಬಹಳ ಮಟ್ಟಿಗೆ ಕಳೆಯಿತು; ಹಗಲು ಸವಿಾಪವಾಯಿತು; ಆದದರಿಂದ ನಾವು ಕತ್ತಲೆಗೆ ಅನುಗುಣವಾದ ಕೃತ್ಯಗಳನ್ನು ಬಿಟ್ಟು ಬೆಳಕಿಗೆ ಅನುಗುಣವಾದ ಆಯುಧಗಳನ್ನು ಧರಿಸಿಕೊಳ್ಳೋಣ.
13 ದುಂದೌತನ ಕುಡಿಕತನಗಳಲ್ಲಾಗಲಿ ಕಾಮವಿಲಾಸ ನಿರ್ಲಜ್ಜಾಕೃತ್ಯಗಳಲ್ಲಿಯಾಗಲಿ ಜಗಳ ಹೊಟ್ಟೇಕಿಚ್ಚು ಗಳಲ್ಲಿಯಾಗಲಿ ಇರದೆ ಹಗಲು ಹೊತ್ತಿಗೆ ತಕ್ಕ ಹಾಗೆ ಮಾನಸ್ಥರಾಗಿ ನಡೆದುಕೊಳ್ಳೋಣ.

14 ನೀವು ದೇಹದ ಆಶೆಗಳನ್ನು ಪೂರೈಸುವದಕ್ಕಾಗಿ ಚಿಂತಿಸದೆ ಕರ್ತನಾದ ಯೇಸು ಕ್ರಿಸ್ತನನ್ನು ಧರಿಸಿಕೊಳ್ಳಿರಿ.

## ಅಧ್ಯಾಯ 14

1 ಆದರೆ ಸಂದೇಹಾಸ್ಪದವಾದವುಗಳನ್ನು ಚರ್ಚಿಸಬೇಡಿರಿ, ನಂಬಿಕೆಯಲ್ಲಿ ದೃಢವಿಲ್ಲ ದವರನ್ನು ಸೇರಿಸಿಕೊಳ್ಳಿರಿ.
2 ಒಬ್ಬನು ಯಾವದನ್ನಾ ದರೂ ತಿನ್ನಬಹುದೆಂದು ನಂಬುತ್ತಾನೆ; ದೃಢವಿಲ್ಲದವನು ಕಾಯಿಪಲ್ಯಗಳನ್ನು ಮಾತ್ರ ತಿನ್ನುತ್ತಾನೆ;

3 ತಿನ್ನುವವನು ತಿನ್ನದವನನ್ನು
ಹೀನೈಸಬಾರದು; ತಿನ್ನದವನು ತಿನ್ನುವವ ನನ್ನು
ದೋಷಿಯೆಂದು ಎಣಿಸಬಾರದು; ದೇವರೇ
ಅವನನ್ನು ಸೇರಿಸಿಕೊಂಡಿದ್ದಾನಲ್ಲಾ.
4 ಮತ್ತೊಬ್ಬನ ಸೇವಕನ ವಿಷಯವಾಗಿ
ತೀರ್ಪುಮಾಡುವದಕ್ಕೆ ನೀನು ಯಾರು?
ಅವನು ನಿಂತರೂ ಬಿದ್ದರೂ ಅದು ಅವನ
ಯಜಮಾನನಿಗೇ ಸೇರಿದ್ದು. ಹೌದು, ಅವನು
ನಿಲ್ಲಿಸಲ್ಪಡುವನು; ಅವನನ್ನು ನಿಲ್ಲಿಸುವದಕ್ಕೆ
ದೇವರು ಶಕ್ತನಾಗಿದ್ದಾನೆ.
5 ಒಬ್ಬನು ಒಂದು ದಿವಸಕ್ಕಿಂತ ಮತ್ತೊಂದು
ದಿವಸವನ್ನು ವಿಶೇಷವೆಂದು ಎಣಿಸುತ್ತಾನೆ.
ಮತ್ತೊಬ್ಬನು ಎಲ್ಲಾ ದಿವಸಗಳನ್ನೂ ಒಂದೇ

ರೀತಿಯಾಗಿ ಎಣಿಸುತ್ತಾನೆ; ಹೀಗಿರಲಾಗಿ ಪ್ರತಿಯೊಬ್ಬನು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡಿರಲಿ.

6 ದಿನವನ್ನು ಗಣ್ಯ ಮಾಡುವವನು ಅದನ್ನು ಕರ್ತನಿಗಾಗಿ ಗಣ್ಯಮಾಡು ತ್ತಾನೆ; ದಿನವನ್ನು ಗಣ್ಯಮಾಡದವನು ಅದನು ಕರ್ತನಿಗಾಗಿ ಗಣ್ಯಮಾಡುವದಿಲ್ಲ; ತಿನ್ನುವವನು ಕರ್ತನಿಗಾಗಿ ತಿನ್ನುತ್ತಾನೆ; ಅವನು ದೇವರಿಗೆ ಉಪಕಾರ ಸ್ತುತಿ ಹೇಳುತ್ತಾನೆ; ತಿನ್ನದಿರುವವನು ಕರ್ತನಿಗಾಗಿ ತಿನ್ನದೆ ದೇವರಿಗೆ ಸೆ

7 ನಮ್ಮಲ್ಲಿ ಒಬ್ಬನಾದರೂ ತನಗಾಗಿ ಬದುಕುವದೂ ಇಲ್ಲ, ತನಗಾಗಿ ಸಾಯುವದೂ ಇಲ್ಲ.

8 ನಾವು ಬದುಕಿದರೆ ಕರ್ತನಿಗಾಗಿ
ಬದುಕುತ್ತೇವೆ; ಸತ್ತರೆ ಕರ್ತನಿಗಾಗಿ
ಸಾಯುತ್ತೇವೆ; ಬದುಕಿದರೂ ಸತ್ತರೂ ನಾವು
ಕರ್ತ ನವರೇ.
9 ಸತ್ತವರಿಗೂ ಜೀವಿಸುವವರಿಗೂ ಒಡೆಯ
ನಾಗಿರಬೇಕೆಂತಲೇ ಕ್ರಿಸ್ತನು ಸತ್ತು ಎದ್ದು
ಜೀವಿತ ನಾದನು.
10 ಆದರೆ ನೀನು ನಿನ್ನ ಸಹೋದರನಿಗೆ
ತೀರ್ಪುಮಾಡುವದು ಯಾಕೆ? ಇಲ್ಲವೆ ನಿನ್ನ
ಸಹೋದರನನ್ನು ಹೀನೈಸುವದು ಯಾಕೆ?
ನಾವೆಲ್ಲರೂ ಕ್ರಿಸ್ತನ ನ್ಯಾಯಾಸನದ ಮುಂದೆ
ನಿಂತುಕೊಳ್ಳಬೇಕಲ್ಲಾ.
11 ನನ್ನ ಜೀವದಾಣೆ, ಪ್ರತಿಯೊಬ್ಬನು ನನ್ನ

ಮುಂದೆ ಮೊಣಕಾಲೂರುವನು ಮತ್ತು ಪ್ರತಿಯೊಂದು ನಾಲಿಗೆಯು ದೇವರಿಗೆ ಅರಿಕೆ ಮಾಡುವದು ಎಂಬದಾಗಿ ಕರ್ತನು ಹೇಳುತ್ತಾನೆ ಎಂದು ಬರೆದದೆ.
12 ಹೀಗಿರಲಾಗಿ ನಮ್ಮಲ್ಲಿ ಪ್ರತಿಯೊಬ್ಬನು ತನ್ನ ತನ್ನ ವಿಷಯವಾಗಿ ದೇವರಿಗೆ ಲೆಕ್ಕ ಒಪ್ಪಿಸಬೇಕು.
13 ಆದಕಾರಣ ಇನ್ನು ಮೇಲೆ ಒಬ್ಬರ ವಿಷಯದ ಲ್ಲೊಬ್ಬರು ಎಂದಿಗೂ ತೀರ್ಪು ಮಾಡದೆ ಇರೋಣ; ಇದಲ್ಲದೆ ಸಹೋದರನ ಎದುರಿಗೆ ಅಡ್ಡಿಯನ್ನಾಗಲಿ ಎಡೆತಡೆಯನ್ನಾಗಲಿ ಹಾಕಲೇಬಾರದೆಂದು ತೀರ್ಮಾನಿ ಸಿಕೊಳ್ಳಿರಿ.

14 ಯಾವ ಪದಾರ್ಥವೂ ಸ್ವತಃ ಅಶುದ್ಧ
ವಾದದ್ದಲ್ಲವೆಂದು ನಾನು ಬಲ್ಲೆನು, ಇದನ್ನು
ನಾನು ಕರ್ತನಾದ ಯೇಸುವಿನ
ಮುಖಾಂತರ ದೃಢವಾಗಿ ನಂಬಿದ್ದೇನೆ; ಆದರೆ
ಯಾವದಾದರೂ ಒಂದು ಪದಾರ್ಥವನ್ನು
ಅಶುದ್ಧವೆಂದು ಒಬ್ಬನು ಭಾವಿಸಿದರೆ ಅವನಿಗೆ
ಅದು ಅಶುದ್ಧವೇ.
15 ನಿನ್ನ ಆಹಾರದಿಂದ ನಿನ್ನ ಸಹೋದರನ
ಮನಸ್ಸಿಗೆ ನೋವಾದರೆ ಪ್ರೀತಿಗೆ ತಕ್ಕಂತೆ ನೀನು
ಇನ್ನು ನಡೆಯುವ ವನಲ್ಲ. ಯಾವನಿಗೋಸ್ಕರ
ಕ್ರಿಸ್ತನು ಸತ್ತನೋ ಅವನನ್ನು ನಿನ್ನ
ಆಹಾರದಿಂದ ಕೆಡಿಸಬಾರದು.
16 ನಿಮಗಿರುವ ಮೇಲು ದೂಷಣೆಗೆ

ಆಸ್ಪದವಾಗಬಾರದು.
17 ಯಾಕಂದರೆ ತಿನ್ನುವದೂ ಕುಡಿಯುವದೂ ದೇವರ ರಾಜ್ಯವಲ್ಲ; ಆದರೆ ನೀತಿಯೂ ಸಮಾಧಾನವೂ ಪವಿತ್ರಾತ್ಮನಲ್ಲಿರುವ ಆನಂದವೂ ಆಗಿದೆ.
18 ಕ್ರಿಸ್ತನ ಸೇವೆಯನ್ನು ಮಾಡುವವನು ಈ ವಿಷಯಗಳಲ್ಲಿ ದೇವರಿಗೆ ಮೆಚ್ಚಿಕೆಯಾದವನಾಗಿಯೂ ಮನುಷ್ಯರಿಗೆ ಸಂಭಾವಿತನಾಗಿಯೂ ಇರುವನಷ್ಟೆ.
19 ಆದದರಿಂದ ನಾವು ಸಮಾಧಾನವನ್ನುಂಟು ಮಾಡುವವುಗಳನೂ ಪರಸ್ಪರ ಭಕ್ತಿವೃದ್ಧಿಯನ್ನುಂಟು ಮಾಡುವವುಗಳನ್ನೂ ಅನುಸರಿಸೋಣ.

20 ದೇವರ ಕಾರ್ಯವನ್ನು ಆಹಾರದ ನಿಮಿತ್ತವಾಗಿ ಕೆಡಿಸಬಾರದು. ಎಲ್ಲಾ ಪದಾರ್ಥಗಳೂ ಶುದ್ಧವೇ ಹೌದು; ಆದರೆ ವಿಘ್ನವನ್ನುಂಟು ಮಾಡು ವಂತೆ ತಿನ್ನುವವನಿಗೆ ಅದು ಕೆಟ್ಟದ್ದಾಗಿದೆ.
21 ದೇವರ ಕಾರ್ಯವನ್ನು ಆಹಾರದ ನಿಮಿತ್ತವಾಗಿ ಕೆಡಿಸಬಾರದು. ಎಲ್ಲಾ ಪದಾರ್ಥಗಳೂ ಶುದ್ಧವೇ ಹೌದು; ಆದರೆ ವಿಘ್ನವನ್ನುಂಟು ಮಾಡು ವಂತೆ ತಿನ್ನುವವನಿಗೆ ಅದು ಕೆಟ್ಟದ್ದಾಗಿದೆ.
22 ನಿನಗೆ ನಂಬಿಕೆಯಿದೆಯೋ? ದೇವರ ಸನ್ನಿಧಿಯಲ್ಲಿ ಅದು ನಿನಗೇ ಇರಲಿ. ಒಬ್ಬನು ತಾನು ಒಪ್ಪುವ ವಿಷಯದಲ್ಲಿ ತನ್ನನ್ನು ತಾನು

ಖಂಡಿಸಿ ಕೊಳ್ಳದಿದ್ದರೆ ಅವನು ಧನ್ಯನು.
23 ಸಂಶಯಪಟ್ಟು ಉಣ್ಣುವವನು ದಂಡಿಸಲ್ಪಡುವನು; ಯಾಕಂದರೆ ಅವನು ನಂಬಿಕೆಯಿಂದ ಉಣ್ಣುವದಿಲ್ಲ. ಯಾವದಕ್ಕೆ ನಂಬಿಕೆಯು ಆಧಾರವಿಲ್ಲವೋ ಅದು ಪಾಪ.

## ಅಧ್ಯಾಯ 15

1 ಆದದರಿಂದ ಬಲವುಳ್ಳವರಾದ ನಾವು ನಮ್ಮನ್ನೇ ಸಂತೋಷಪಡಿಸಿಕೊಳ್ಳದೆ ದುರ್ಬಲರ ಬಲಹೀನತೆಗಳನ್ನು ಸಹಿಸಿಕೊಳ್ಳತಕ್ಕದ್ದು.
2 ನಮ್ಮಲ್ಲಿ ಪ್ರತಿಯೊಬ್ಬನು ತನ್ನ ನೆರೆಯವನ

ಭಕ್ತಿ ವೃದ್ಧಿಯ ಹಿತಕ್ಕಾಗಿ ಅವನನ್ನು
ಸಂತೋಷಪಡಿಸಲಿ.
3 ಆದರೆ--ನಿನ್ನನ್ನು ದೂಷಿಸುವವರ
ದೂಷಣೆಗಳು ನನ್ನ ಮೇಲೆ ಬಿದ್ದವು
ಎಂಬದಾಗಿ ಬರೆಯಲ್ಪಟ್ಟಂತೆ ಕ್ರಿಸ್ತ ನಾದರೋ
ತನ್ನನ್ನು ತಾನು ಸಂತೋಷಪಡಿಸಿಕೊಳ್ಳಲಿಲ್ಲ.
4 ನಾವು ತಾಳ್ಮೆಯ ಮತ್ತು ಬರಹಗಳ
ಆದರಣೆಯ ಮೂಲಕ ನಿರೀಕ್ಷೆ
ಹೊಂದುವಂತೆ ಪೂರ್ವಕಾಲದಲ್ಲಿ
ಬರೆಯಲ್ಪಟ್ಟವುಗಳೆಲ್ಲಾ ನಮಗೆ
ಉಪದೇಶಿಸುವ ದಕ್ಕಾಗಿಯೇ
ಬರೆಯಲ್ಪಟ್ಟವು.
5 ನೀವು ಕ್ರಿಸ್ತ ಯೇಸು ವನ್ನು ಅನುಸರಿಸಿ

ಒಂದೇ ಮನಸ್ಸುಳ್ಳವರಾಗಿರುವಂತೆ ತಾಳ್ಮೆಯೂ ಆದರಣೆಯೂ ಉಳ್ಳ ದೇವರು ನಿಮಗೆ ಅನುಗ್ರಹಿಸಲಿ.
6 ಹೀಗೆ ನೀವು ಏಕ ಮನಸ್ಸಿನಿಂದಲೂ ಒಂದೇ ಬಾಯಿಂದಲೂ ನಮ್ಮ ಕರ್ತನಾದ ಯೇಸು ಕ್ರಿಸ್ತನ ತಂದೆಯಾದ ದೇವರನ್ನು ಮಹಿಮೆಪಡಿಸುವಿರಿ.
7 ಆದದರಿಂದ ಕ್ರಿಸ್ತನು ಸಹ ನಿಮ್ಮನ್ನು ದೇವರ ಮಹಿಮೆಗಾಗಿ ಸೇರಿಸಿಕೊಂಡಂತೆ ನೀವೂ ಒಬ್ಬರ ನೊಬ್ಬರು ಸೇರಿಸಿಕೊಳ್ಳಿರಿ.
8 ಹೀಗಿರುವದರಿಂದ ಪಿತೃ ಗಳಿಗೆ ಮಾಡಿದ ವಾಗ್ದಾನಗಳನ್ನು ದೃಢಪಡಿಸುವದಕ್ಕೆ ದೇವರ ಸತ್ಯಕ್ಕಾಗಿ ಯೇಸು ಕ್ರಿಸ್ತನು ಸುನ್ನತಿಯವರಿಗೆ

ಸೇವಕನಾಗಿದ್ದನೆಂದು ನಾನು ಹೇಳುತ್ತೇನೆ.
9 ಈ ಕಾರಣದಿಂದ ನಾನು ಅನ್ಯಜನಗಳ
ಮಧ್ಯದಲ್ಲಿ ನಿನ್ನನು ಅರಿಕೆ ಮಾಡಿ ನಿನ್ನ
ನಾಮವನ್ನು ಸಂಕೀರ್ತಿಸುವೆನು ಎಂದು
ಬರೆದಿರುವ ಪ್ರಕಾರ ಅನ್ಯಜನಗಳು ದೇವರ
ಕರುಣೆಗಾಗಿ ಆತನನ್ನು ಮಹಿಮೆಪಡಿಸುವರು.
10 ಆತನು ತಿರಿಗಿ--ಅನ್ಯಜನರೇ, ಆತನ
ಜನರೊಂದಿಗೆ ಸಂತೋಷಿಸಿರಿ ಎಂದು
ಹೇಳುತ್ತಾನೆ.
11 ತಿರಿಗಿ--ಎಲ್ಲಾ ಅನ್ಯಜನರೇ, ಕರ್ತನನ್ನು
ಸ್ತುತಿಸಿರಿ; ಎಲ್ಲಾ ಜನರೇ, ಆತನನ್ನು
ಕೊಂಡಾಡಿರಿ ಅನ್ನುತ್ತಾನೆ.
12 ತಿರಿಗಿ ಯೆಶಾಯನು--ಇಷಯನ

ಅಂಕುರದವನು ಎದ್ದು ಅನ್ಯ ಜನಾಂಗಗಳ
ಮೇಲೆ ಆಡಳಿತ ಮಾಡುವನು; ಅನ್ಯ ಜನರು
ಆತನಲ್ಲಿ ನಂಬಿಕೆಯಿಡುವರು ಅಂದನು.
13 ನಿರೀಕ್ಷೆಗೆ ಆಧಾರನಾದ ದೇವರು
ಪವಿತ್ರಾತ್ಮನ ಬಲದಿಂದ ನೀವು ನಿರೀಕ್ಷೆಯಲ್ಲಿ
ಅಭಿವೃದ್ಧಿ ಹೊಂದು ವಂತೆ
ನಂಬಿಕೆಯಿಂದುಂಟಾದ ಸಂತೋಷ
ಸಮಾಧಾನಗಳಿಂದ ನಿಮ್ಮನ್ನು ತುಂಬಿಸಲಿ.
14 ನನ್ನ ಸಹೋದರರರೇ, ನೀವಂತೂ
ಒಳ್ಳೇತನ ದಿಂದಲೂ ಸಕಲ ಜ್ಞಾನದಿಂದಲೂ
ತುಂಬಿದವರಾಗಿ ಒಬ್ಬರಿಗೊಬ್ಬರು ಬುದ್ಧಿ
ಹೇಳುವದಕ್ಕೆ ಶಕ್ತರಾಗಿದ್ದೀರೆಂದು ನಿಮ್ಮ
ವಿಷಯದಲ್ಲಿ ನನಗೂ ನಿಶ್ಚಯವುಂಟು.

15 ಆದಾಗ್ಯೂ ಸಹೋದರರರೇ, ದೇವರು
ನನಗೆ ಕೊಟ್ಟ ಕೃಪೆಯಿಂದ ಇವುಗಳನ್ನು ನಿಮ್ಮ
ಜ್ಞಾಪಕಕ್ಕೆ ತರುವ ಹಾಗೆ ನಾನು ಒಂದು
ವಿಧದಲ್ಲಿ ಹೆಚ್ಚು ಧೈರ್ಯದಿಂದ ನಿಮಗೆ
ಬರೆದಿದ್ದೇನೆ;
16 ಹೀಗೆ ಅನ್ಯಜನಗಳೆಂಬ ಅರ್ಪಣೆಯು
ಪವಿತ್ರಾತ್ಮನ ಮೂಲಕ ಶುದ್ಧೀಕರಿಸಲ್ಪಟ್ಟು
ಆತನಿಂದ ಅಂಗೀಕಾರವಾಗುವಂತೆ ನಾನು
ದೇವರ ಸುವಾರ್ತಾ ಸೇವೆಯನ್ನು ನಡಿಸುತ್ತಾ
ಅನ್ಯಜನರಿಗೆ ಯೇಸು ಕ್ರಿಸ್ತನ
ಸೇವಕನಾಗಿರುವೆನು.
17 ಆದದರಿಂದ ದೇವರಿಗೆ
ಸಂಬಂಧಪಟ್ಟವುಗಳಲ್ಲಿ ಯೇಸು ಕ್ರಿಸ್ತನ

ಮೂಲಕ ನಾನು ಹೆಚ್ಚಳಪಡುತ್ತೇನೆ.
18 ಮಾತಿ ನಿಂದಲೂ ಕ್ರಿಯೆಯಿಂದಲೂ
ಬಲವಾದ ಸೂಚಕ ಕಾರ್ಯಗಳಿಂದಲೂ
ಅದ್ಭುತಕಾರ್ಯಗಳಿಂದಲೂ ದೇವರಾತ್ಮನ
ಬಲದಿಂದಲೂ ಅನ್ಯಜನಗಳವರು
ವಿಧೇಯರಾಗುವಂತೆ ಕ್ರಿಸ್ತನು ನನ್ನ ಮೂಲಕ
ಮಾಡ ದಿರುವವುಗಳನ್ನು ಮಾತನಾಡಲು
ನಾನು ಧೈರ್ಯ ಪಡುವದಿಲ್ಲ.
19 ಹೀಗೆ ಯೆರೂಸಲೇಮ್ ಮೊದಲು
ಗೊಂಡು ಇಲ್ಲುರಿಕದ ಸುತ್ತಲೂ ನಾನು ಕ್ರಿಸ್ತನ
ಸುವಾರ್ತೆಯನ್ನು ಪೂರ್ಣವಾಗಿ ಸಾರಿದ್ದೇನೆ.
20 ಹೌದು, ಬೇರೆಯವನ ಅಸ್ತಿವಾರದ
ಮೇಲೆ ನಾನು ಕಟ್ಟದಂತೆ ಕ್ರಿಸ್ತನ ಹೆಸರು

ತಿಳಿಸದಿರುವ ಕಡೆಯಲ್ಲಿ ನಾನು
ಸುವಾರ್ತೆಯನ್ನು ಸಾರುವದಕ್ಕೆ ಪ್ರಯಾಸ
ಪಟ್ಟಿದ್ದೇನೆ.
21 ಆದರೆ ಬರೆಯಲ್ಪಟ್ಟಂತೆ--ಯಾರಿಗೆ ಆತನ
ವಿಷಯವಾಗಿ ಹೇಳಲಿಲ್ಲವೋ ಅವರು
ನೋಡುವರು; ಯಾರು ಕೇಳಲಿಲ್ಲವೋ
ಅವರು ಗ್ರಹಿಸುವರು ಎಂಬದೇ.
22 ಈ ಕಾರಣದಿಂದ ನಿಮ್ಮ ಬಳಿಗೆ
ಬರುವದಕ್ಕೆ ನನಗೆ ಬಹಳ
ಅಭ್ಯಂತರವಾಯಿತು.
23 ಆದರೆ ಈ ಪ್ರದೇಶಗಳಲ್ಲಿ ಸೇವೆಗೆ ಇನ್ನೂ
ಸ್ಥಳವಿಲ್ಲದ ಕಾರಣ ನಿಮ್ಮ ಬಳಿಗೆ
ಬರಬೇಕೆಂದು ಅನೇಕ ವರುಷಗಳಿಂದ ನನಗೆ

ಬಹಳ ಅಭಿಲಾಷೆಯಿರುವದರಿಂದ
24 ನಾನು ಸ್ಪೇನ್ ದೇಶಕ್ಕೆ ಯಾವ
ಸಮಯದಲ್ಲಿಯಾದರೂ ಪ್ರಯಾಣ
ಕೈಕೊಂಡರೆ ನಿಮ್ಮ ಬಳಿಗೆ ಬರುವೆನು;
ಯಾಕಂದರೆ ನನ್ನ ಪ್ರಯಾಣದಲ್ಲಿ ನಾನು
ನಿಮ್ಮನ್ನು ನೋಡುವೆನೆಂದು ಭರವಸವುಂಟು.
ಇದಲ್ಲದೆ ಮೊದಲು ನಿಮ್ಮ ಅನ್ಯೋನ್ಯತೆಯಲ್ಲಿ
ಸಂತೃಪ್ತನಾಗಿ ಮುಂದೆ ನನ್ನ ಮಾರ್ಗದಲ್ಲಿ
ನಿಮ್ಮಿಂದ ಸಾಗಕ
25 ಆದರೆ ಈಗ ಪರಿಶುದ್ಧರಿಗೆ
ಸೇವೆಮಾಡುವದಕ್ಕೋಸ್ಕರ ನಾನು
ಯೆರೂಸಲೇಮಿಗೆ ಹೋಗುತ್ತೇನೆ.
26 ಯೆರೂಸಲೇಮಿನಲ್ಲಿರುವ ಬಡವ ರಾದ

ಪರಿಶುದ್ಧರಿಗೆ ಸ್ವಲ್ಪ ಸಹಾಯಮಾಡಲು ಮಕೆದೋನ್ಯ ಮತ್ತು ಅಖಾಯದವರು ಇಷ್ಟಪಟ್ಟಿದ್ದಾರೆ.
27 ಇದನ್ನು ಮಾಡುವದಕ್ಕೆ ಋಣಸ್ಥರಾಗಿರುವದರಿಂದ ಅವರು ನಿಜವಾಗಿಯೂ ಇಷ್ಟಪಟ್ಟಿದ್ದಾರೆ. ಹೇಗಂದರೆ ಅನ್ಯಜನರು ಅವರ ಆತ್ಮಸಂಬಂಧವಾದವುಗಳಲ್ಲಿ ಪಾಲುಗಾರರಾದ ಮೇಲೆ ಶರೀರಸಂಬಂಧವಾದ ವುಗಳಲ್ಲಿಯೂ ಅವರಿಗೆ ಸೇವೆ ಮಾಡುವದು ಮಾತ್ರ ವಲ್ಲದೆ ಅದು ಅವರ ಕರ್ತವ್ಯವೂ ಆಗಿದೆ.
28 ನಾನು ಈ ಕೆಲಸವನ್ನು ತೀರಿಸಿಕೊಂಡು ಈ ಫಲವನ್ನು ಭದ್ರವಾಗಿ ಅಲ್ಲಿಯವರ ವಶಕ್ಕೆ

ಕೊಟ್ಟಮೇಲೆ ನಿಮ್ಮ ಮಾರ್ಗವಾಗಿ ಸ್ಪೇನಿಗೆ ಬರುವೆನು.
29 ಹೀಗೆ ನಾನು ನಿಮ್ಮ ಬಳಿಗೆ ಬಂದಾಗ ಕ್ರಿಸ್ತನ ಸುವಾರ್ತೆಯ ಆಶೀರ್ವಾದದ ಪರಿಪೂರ್ಣತೆಯಿಂದ ಬರುವೆನೆಂದು ನನಗೆ ನಿಶ್ಚಯವುಂಟು.
30 ಸಹೋದರರೇ, ನೀವು ನನಗೋಸ್ಕರ ದೇವರ ಮುಂದೆ ಮಾಡುವ ಪ್ರಾರ್ಥನೆಗಳಲ್ಲಿ ನನ್ನೊಂದಿಗೆ ಹೋರಾಟದಿಂದ ವಿಜ್ಞಾಪಿಸಿಕೊಳ್ಳಬೇಕೆಂದು ಕರ್ತನಾದ ಯೇಸು ಕ್ರಿಸ್ತನ ನಿಮಿತ್ತವಾಗಿಯೂ ಪವಿತ್ರಾತ್ಮನ ಪ್ರೀತಿಯ ನಿಮಿತ್ತವಾಗಿಯೂ ನಿಮ್ಮನ್ನು ಬೇಡಿ ಕೊಳ್ಳುತ್ತೇನೆ.

31 ಯೂದಾಯದಲ್ಲಿ ನಂಬದವರಿಂದ
ನನ್ನನ್ನು ತಪ್ಪಿಸಬೇಕೆಂತಲೂ
ಯೆರೂಸಲೇಮಿಗೋಸ್ಕರ ನನ್ನ ಸೇವೆಯು ಆ
ಪರಿಶುದ್ಧರಿಗೆ ಹಿತಕರವಾಗಿ
ತೋರಬೇಕೆಂತಲೂ
32 ಹೀಗೆ ನಾನು ದೇವರ ಚಿತ್ತಾ ನುಸಾರ
ಆನಂದವುಳ್ಳವನಾಗಿ ನಿಮ್ಮಲ್ಲಿಗೆ ಬಂದು ನಿಮ್ಮ
ಸಂಗಡ ವಿಶ್ರಾಂತಿ ಹೊಂದುವಂತೆಯೂ
ಪ್ರಾರ್ಥಿಸಿರಿ.
33 ಶಾಂತಿದಾಯಕನಾದ ದೇವರು
ನಿಮ್ಮೆಲ್ಲರೊಂದಿಗಿ ರಲಿ. ಆಮೆನ್.

## ಅಧ್ಯಾಯ 16

1 ನಾನು ನಿಮಗೆ ಒಪ್ಪಿಸುವ ನಮ್ಮ
ಸಹೋದರಿಯಾದ ಫೊಯಿಬೆಯನ್ನು
ಪ್ರೀತಿಯಿಂದ ಅಂಗೀಕರಿಸಿರಿ. ಆಕೆಯು
ಕೆಂಕ್ರೆಯ ಲ್ಲಿರುವ ಸಭೆಯ ಸೇವಕಳಾಗಿದ್ದಾಳೆ.
2 ನೀವು ಆಕೆಯನ್ನು ಪರಿಶುದ್ಧರಿಗೆ ತಕ್ಕಂತೆ
ಕರ್ತನಲ್ಲಿ ಅಂಗೀಕರಿಸಿ ಆಕೆಯ ಕೆಲಸದಲ್ಲಿ
ಆಕೆಗೆ ಅವಶ್ಯವಾದ ಸಹಾಯವನ್ನು ಮಾಡಿರಿ;
ಆಕೆಯು ನನಗೂ ಅನೇಕರಿಗೂ ಸಹಾಯ
ಮಾಡಿದವಳಾಗಿದ್ದಾಳೆ.
3 ಕ್ರಿಸ್ತ ಯೇಸುವಿನಲ್ಲಿ ನನ್ನ ಸಹಾಯಕರಾದ
ಪ್ರಿಸ್ಕಿಲ್ಲಳಿಗೂ ಅಕ್ವಿಲನಿಗೂ ನನ್ನ

ವಂದನೆಗಳನ್ನು ತಿಳಿಸಿರಿ.
4 ಅವರು ನನ್ನ ಪ್ರಾಣಕ್ಕಾಗಿ ತಮ್ಮ
ಕುತ್ತಿಗೆಗಳನ್ನೇ ಒಡ್ಡಿದ್ದರು. ನಾನು ಮಾತ್ರವೇ
ಅಲ್ಲ, ಅನ್ಯಜನರ ಸಭೆಗಳವರೆಲ್ಲರೂ ಅವರನ್ನು
ವಂದಿಸುತ್ತಾರೆ.
5 ಅದರಂತೆಯೇ ಅವರ ಮನೆಯಲ್ಲಿರುವ
ಸಭೆಗೂ ವಂದನೆ ಹೇಳಿರಿ; ಅಖಾಯದಲ್ಲಿ
ಕ್ರಿಸ್ತನಿಗೆ ಪ್ರಥಮ ಫಲವಾಗಿರುವ ನನ್ನ
ಪ್ರಿಯನಾದ ಎಪ್ಪೈನೆತನಿಗೂ ವಂದನೆ.
6 ನಮಗೋಸ್ಕರ ಬಹು ಶ್ರಮೆಪಟ್ಟ
ಮರಿಯಳಿಗೆ ವಂದನೆ.
7 ನನಗಿಂತ ಮೊದಲು ಕ್ರಿಸ್ತ ನಲ್ಲಿದ್ದು
ಅಪೊಸ್ತಲರಲ್ಲಿ ಪ್ರಖ್ಯಾತಿಗೊಂಡ ನನ್ನ

ಬಂಧುಗಳೂ ನನ್ನ ಜೊತೆ ಸೆರೆಯವರೂ
ಆಗಿರುವ ಅಂದ್ರೋನಿಕನಿಗೂ ಯೂನ್ಯನಿಗೂ
ವಂದನೆಗಳು.
8 ಕರ್ತನಲ್ಲಿ ನನ್ನ ಪ್ರಿಯನಾಗಿರುವ
ಅಂಪ್ಲಿಯಾತನಿಗೆ ವಂದನೆ.
9 ಕ್ರಿಸ್ತನಲ್ಲಿ ನಮ್ಮ ಸಹಾಯಕನಾದ
ಉರ್ಬಾನನನಿಗೂ ನನ್ನ ಪ್ರಿಯನಾದ
ಸ್ತಾಖುನಿಗೂ ವಂದನೆಗಳು.
10 ಕ್ರಿಸ್ತನಲ್ಲಿ ಮೆಚ್ಚಿಕೆ ಹೊಂದಿದ ಅಪೆಲ್ಲ ನಿಗೆ
ವಂದನೆ; ಅರಿಸ್ತೊಬೂಲನ ಮನೆಯವರಿಗೆ
ವಂದನೆಗಳು.
11 ನನ್ನ ಬಂಧುವಾದ ಹೆರೊಡಿಯೋ ನನಿಗೆ
ವಂದನೆ. ಕರ್ತನಲ್ಲಿರುವ ನಾರ್ಕಿಸ್ಸನ ಮನೆ

ಯವರಿಗೆ ವಂದನೆಗಳು.
12 ಕರ್ತನಲ್ಲಿ ಪ್ರಯಾಸಪ ಡುವ ತ್ರುಫೈನಳಿಗೂ ತ್ರುಫೋಸಳಿಗೂ ವಂದನೆಗಳು. ಕರ್ತನಲ್ಲಿ ಹೆಚ್ಚಾಗಿ ಪ್ರಯಾಸಪಟ್ಟಿರುವ ಪ್ರಿಯ ಪೆರ್ಸೀ ಸಳಿಗೆ ವಂದನೆ.
13 ಕರ್ತನಲ್ಲಿ ಆರಿಸಲ್ಪಟ್ಟ ರೂಫನಿಗೂ ನನಗೆ ತಾಯಿಯಂತಿರುವ ಅವನ ತಾಯಿಗೂ ವಂದನೆ ಗಳು.
14 ಅಸುಂಕ್ರಿತನಿಗೂ ಪ್ಲೆಗೋನನಿಗೂ ಹೆರ್ಮೇ ಯನಿಗೂ ಪತ್ರೊಬನಿಗೂ ಹೆರ್ಮಾನನಿಗೂ ಅವ ರೊಂದಿಗಿರುವ ಸಹೋದರರಿಗೂ ವಂದನೆಗಳು.
15 ಫಿಲೊಲೊಗನಿಗೂ ಯೂಲ್ಯಳಿಗೂ

ನೇರ್ಯನಿಗೂ ಅವನ ಸಹೋದರರಿಗೂ
ಒಲುಂಪನಿಗೂ ಅವರೊಂದಿ ಗಿರುವ
ಪರಿಶುದ್ಧರೆಲ್ಲರಿಗೂ ವಂದನೆಗಳು.
16 ಪವಿತ್ರ ವಾದ ಮುದ್ದಿನಿಂದ
ಒಬ್ಬರನ್ನೊಬ್ಬರು ವಂದಿಸಿರಿ. ಕ್ರಿಸ್ತನ ಸಭೆಗಳು
ನಿಮ್ಮನ್ನು ವಂದಿಸುತ್ತವೆ.
17 ಸಹೋದರರೇ, ನೀವು ಹೊಂದಿದ
ಉಪದೇಶಕ್ಕೆ ವಿರುದ್ಧವಾಗಿ ಭೇದಗಳನ್ನೂ
ವಿಘ್ನಗಳನ್ನೂ ನಿಮ್ಮಲ್ಲಿ ಉಂಟು
ಮಾಡುವವರನ್ನು ಗುರುತಿಟ್ಟು ಅವರನ್ನು
ಬಿಟ್ಟು ತೊಲಗಿಹೋಗಿರಿ ಎಂದು ನಾನು
ನಿಮ್ಮನ್ನು ಬೇಡಿ ಕೊಳ್ಳುತ್ತೇನೆ.
18 ಅಂಥವರು ನಮ್ಮ ಕರ್ತನಾದ ಯೇಸು

ಕ್ರಿಸ್ತನ ಸೇವೆಯನ್ನು ಮಾಡದೆ ತಮ್ಮ
ಹೊಟ್ಟೆಯ ಸೇವೆಯನ್ನೇ ಮಾಡುವವರಾಗಿ
ನಯದ ನುಡಿ ಗಳಿಂದಲೂ ಹೊಗಳಿಕೆಯ
ಮಾತುಗಳಿಂದಲೂ ನಿಷ್ಕಪ ಟಿಗಳ
ಹೃದಯಗಳನ್ನು ಮೋಸಗೊಳಿಸುತ್ತಾರೆ.
19 ನಿಮ್ಮ ವಿಧೇಯತ್ವವು ಎಲ್ಲರಿಗೂ
ಪ್ರಸಿದ್ಧವಾಗಿದ್ದದರಿಂದ ನಿಮ್ಮ ವಿಷಯದಲ್ಲಿ
ನಾನು ಆನಂದಪಡುತ್ತೇನೆ. ಆದಾಗ್ಯೂ ನೀವು
ಒಳ್ಳೇತನದ ವಿಷಯದಲ್ಲಿ ಜಾಣರೂ
ಕೆಟ್ಟತನದ ವಿಷಯದಲ್ಲಿ ಕಳಂಕವಿಲ್ಲದವರೂ
ಆಗಿರಬೇಕೆಂದು ಅಪೇಕ್ಷಿಸುತ್ತೇನೆ.
20 ಶಾಂತಿದಾಯಕನಾದ ದೇವರು
ಶೀಘ್ರವಾಗಿ ಸೈತಾನನನ್ನು ನಿಮ್ಮ ಪಾದಗಳ

ಕೆಳಗೆ ತುಳಿದುಬಿಡುವನು. ನಮ್ಮ ಕರ್ತನಾದ
ಯೇಸು ಕ್ರಿಸ್ತನ ಕೃಪೆಯು ನಿಮ್ಮೊಂದಿಗಿರಲಿ.
ಆಮೆನ್.
21 ನನ್ನ ಜೊತೆ ಕೆಲಸದವನಾದ
ತಿಮೊಥೆಯನೂ ನನ್ನ ಬಂಧುಗಳಾದ
ಲೂಕ್ಯನೂ ಯಾಸೋನನೂ ಸೋಸಿಪತ್ರನೂ
ನಿಮಗೆ ವಂದನೆಗಳನ್ನು ಹೇಳುತ್ತಾರೆ.
22 ಈ ಪತ್ರಿಕೆಯನ್ನು ಬರೆದ ತೆರ್ತ್ಯನೆಂಬ
ನಾನು ನಿಮ್ಮನ್ನು ಕರ್ತನಲ್ಲಿ ವಂದಿಸುತ್ತೇನೆ.
23 ನನಗೂ ಸಮಸ್ತ ಸಭೆಗೂ
ಅತಿಥಿಸತ್ಕಾರವನ್ನು ಮಾಡುತ್ತಿರುವ ಗಾಯನು
ನಿಮ್ಮನ್ನು ವಂದಿಸುತ್ತಾನೆ. ಈ ಪಟ್ಟಣದ
ಖಜಾನೆಯ ಮೇಲ್ವಿಚಾರಕ ನಾಗಿರುವ

ಎರಸ್ತನೂ ಸಹೋದರನಾದ ಕ್ವರ್ತನೂ
ನಿಮಗೆ ವಂದನೆಗಳನ್ನು ಹೇಳುತ್ತಾರೆ.
24 ನಮ್ಮ ಕರ್ತನಾದ ಯೇಸು ಕ್ರಿಸ್ತನ
ಕೃಪೆಯು ನಿಮ್ಮೆಲ್ಲರೊಂದಿಗಿರಲಿ. ಆಮೆನ್.
25 ಪ್ರಕಟನೆಯಾದ ಈ ಮರ್ಮಕ್ಕೆ
ಅನುಸಾರ ಅಂದರೆ ಯೇಸು ಕ್ರಿಸ್ತನ
ವಿಷಯವಾದಂಥ ನಾನು ಸಾರುವಂಥ
ಸುವಾರ್ತೆಗನುಸಾರ ನಿಮ್ಮನ್ನು ಸ್ಥಿರಪಡಿ
ಸುವದಕ್ಕೆ ಶಕ್ತನಾಗಿರುವಾತನಿಂದ
26 ಅನಾದಿಯಿಂದ ಗುಪ್ತವಾಗಿದ್ದ ಮರ್ಮವು
ಈಗ ಪ್ರಕಾಶಕ್ಕೆ ಬಂದು ನಿತ್ಯನಾದ ದೇವರ
ಅಪ್ಪಣೆಯ ಪ್ರಕಾರ ಪ್ರವಾದಿಗಳ ಗ್ರಂಥಗಳ
ಮೂಲಕ ಅನ್ಯಜನರೆಲ್ಲರಿಗೆ ನಂಬಿಕೆಯೆಂಬ

ವಿಧೇಯತ್ವವನ್ನು
ಉಂಟುಮಾಡುವದಕ್ಕೋಸ್ಕರ ತಿಳಿಸ ಲ್ಪಟ್ಟಿದೆ.
27 ಜ್ಞಾನಿಯಾದ ಒಬ್ಬನೇ ದೇವರಿಗೆ ಯೇಸು ಕ್ರಿಸ್ತನ ಮೂಲಕ ಎಂದೆಂದಿಗೂ ಮಹಿಮೆ ಉಂಟಾಗಲಿ. ಆಮೆನ್.